ಶ್ರೀಮನ್ಮಹಾರಾಜರವರ ಕೃಪೆಯಿಂದ ಪೋಷಿತವಾದುದು

# ಕರ್ಣಾಟಕ ಹಂಸಸಂದೇಶ



ಲೇಖಕ:

ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯ

ಮೈಸೂರು

ಶ್ರೀ ಸತ್ಯನಾರಾಯಣ ಪವರ್ ಪ್ರೆಸ್ಸಿನಲ್ಲಿ

ಮುದ್ರಿತವಾದುದು

೧೯೩೪

ಬೆಲೆ ೦—೧೦—೦

॥ ಶ್ರೀಃ ॥

ಶ್ರೀಮನ್ಮಾಲ್ವಡಿ

ಶ್ರೀ ಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್

ಜಿ. ಸಿ. ಎಸ್. ಐ., ಜಿ. ಬಿ. ಇ.,

ಮಹಾಪ್ರಭುಗಳ ದಿವ್ಯಸನ್ನಿಧಾನಂಗಳಲ್ಲಿ ಈ ಗ್ರಂಥವು
ಸಮರ್ಪಿತವಾಗಿದೆ

ಮತ್ತು

ಶ್ರೀಮತ್ ಯುವರಾಜಕುಮಾರರು

ಶ್ರೀಮತ್ ಶ್ರೀ ಜಯಚಾಮರಾಜೇಂದ್ರ ಒಡೆಯರ್‌ರವರ

ವಿವಾಹಮಹೋತ್ಸವದ ಜ್ಞಾಪಕಾರ್ಥವಾಗಿ
ಈ ಕಾವ್ಯವು ಪ್ರಕಾಶಿತವಾಗಿದೆ.

ಗ್ರಂಥಕರ್ತೃ.

|| ಶ್ರೀಃ ||

ಆಸ್ಥಾನ ಮಹಾವಿದ್ವಾನ್ ವೇ|| ಬ್ರ|| ಶ್ರೀ|| ಸಾಹಿತ್ಯರತ್ನಂ ಕಾನಕಾನ ಹಳ್ಳಿ ನಾರಾಯಣಶಾಸ್ತ್ರಿಗಳವರು ಈ ಗ್ರಂಥವನ್ನು ಓದಿಸಿ ಕೇಳಿ ಉತ್ತಮವಾದ ಸಲಹೆಗಳನ್ನು ಕೊಟ್ಟು ಉಪಕರಿಸಿದ್ದಾರೆ.

ಈ ಗ್ರಂಥಪ್ರಕಾಶ, ಶ್ರೀಮನ್ಮಹಾರಾಜರವರಿಗೆ ಅರ್ಪಣೆಮಾಡುವುದು, ಭಾವಚಿತ್ರಗಳನ್ನು ಮುದ್ರಿಸುವುದು ಇವುಗಳಿಗೆ ಸಂಪೂರ್ಣವಾಗಿ ಸಹಾಯ ಮಾಡಿಸಿದ ಅ|| ಸೆ|| ಸಾಹೇಬರವರಿಗೂ, ಹುಜೂರು ಸೆಕ್ರೆಟರಿ ಸಾಹೇಬರವರಿಗೂ ಕೃತಜ್ಞತಾಪೂರ್ವಕ ವಂದನೆಗಳನ್ನು ಅರ್ಪಿಸಲಾಗಿದೆ.

ಅಷ್ಟೇ ಅಲ್ಲದೆ "ಪ್ರಿಫೇಸ್ ವಿಮರ್ಶೆ" ಗಳನ್ನು ಬರೆದುಕೊಟ್ಟ ಇಬ್ಬರು ಮಹೋದಾರರಿಗೂ, ಮನೋಹರವಾಗಿ 'ರಾಮಹಂಸದ' ಚಿತ್ರವನ್ನು ಬರೆದು ಕೊಟ್ಟ ಅರಮನೆಯ ಶಿಲ್ಪಿಗಳು ಮ|| ವೈ. ಸುಬ್ರಹ್ಮಣ್ಯರಾಜುರವರಿಗೂ, ಮ|| ಡಿ. ಎಸ್. ಎಸ್. ಗೌಡ, ಬಿ.ಎಸ್‌ಸಿ., ರವರಿಗೂ, ನಾನಾವಿಧವಾಗಿ ಪ್ರೋತ್ಸಾಹಿಸಿ ಉಪಕರಿಸಿದ ಎಲ್ಲ ಮಹನೀಯರಿಗೂ ನನ್ನ ಕೃತಜ್ಞತೆಯನ್ನು ಸಲ್ಲಿಸುವುದು ಮುಖ್ಯಕಾರ್ಯವಾಗಿದೆ.

ಕಾಲಕ್ಕೆ ಸರಿಯಾಗಿ ಅಂದವಾಗಿ ಮುದ್ರಿಸಿಕೊಟ್ಟ ಶ್ರೀ ಸತ್ಯನಾರಾಯಣ ಪವರ್ ಪ್ರೆಸ್ಸಿನವರಿಗೂ ಕೃತಜ್ಞನಾಗಿದ್ದೇನೆ.

ಗ್ರಂಥಕರ್ತೃ.



ಶ್ರೀಮನ್ಮಹಾರಾಜಾಧಿರಾಜ

**ಸರ್. ಶ್ರೀಕೃಷ್ಣರಾಜೇಂದ್ರ ಒಡೆಯರ್ ಬಹದ್ದೂರ್**

ಜಿ.ಸಿ.ಎಸ್.ಐ., ಜಿ.ಬಿ.ಇ.

**ಕರ್ಣಾಟಕ ಮಹಾಪ್ರಭುಗಳವರು.**

# PREFACE.

---

Two things have of late been sources of very great pleasure to me. One, the moderaised study of Sanskrit and the other, the rendering into Kannada of some Sanskrit works for the benefit of the general public. It is gratifying to note that even Pandits, conservative in their very nature, are coming forward now to serve their countrymen thus in the literary field. It is no wonder that they do so since they have as their distinguished patron His Highness the Maharaja Sri Krishnarajendra Wodeyar Bahadur of Mysore.

In the booklet placed before us Pandit Sriman Hullahalli Gopalakrishnamachar, who is well acquainted with Sanskrit and Kannada, has interpreted in the language of the country Sri Bhagavan Venkatanathacharya's "Hamsa Sandesa" a monumental work of great repute in Sanskrit, which abounds in high ideals, lofty sentiments and inexorable faith in the divine being.

Sri Venkatanathacharia, familiarly known as Venkatanatha Mahakavi belongs to the 13th and 14th centuries, being born of Ananta soori and Thotharamba in Tooppil Agrahar in the suburbs of Conjeevaram. The Acharia sat at the feet of his maternal uncle Sri Atreya Ramanujacharia for his education. Even before he attained his twentieth year he was a profound scholar proficient in every branch of knowledge and later in life he gave discourses in Sri Bhashya to more than thirty sets of earnest disciples altogether devoted to him. This is made clear from the various references made in "Sankalpa Suryodaya" another notable work of the Acharya.

Sri Venkatanatha was a devotee of Sri Hayagriva, the fountain-head of all knowledge in the world. His written works number as many as 121, comprising works relating to general, Literature, Logic, Philosophy, morals, religion and several secular subjects of minor importance. His knowledge of tamil was equally good. Nyaya Siddhanjana, Gita Bhashya Tatparya Chandrika, Sankalpa Suryodaya, Subhashita Nivi, Varadaraja Panchasat are a few of his works which indicate unfailingly the extent of his knowledge and his versatile genius. The Acharya's special mission in spreading the knowledge of Visishtadwaita Vedanta was subsequently followed up by Sri Kumara Varadacharia, Sri Brahmatantra Swatantra Swami and during the last stages such service was rendered to the extent possible even by the forefathers of the present translator of Hamsa Sandesa.

Those who desire to understand the real significance of Hamsa Sandesa will do well to look carefully into the well-known commentary on this work of His Holiness Sri Sri Krishna Bramhatantra Parakala Swami of Sahitya fame and poetic renown and also the valuable, learned and explanatory note and criticism prepared at His Holiness' command by the late lamented Mahavidwan Dharmadhikari Pandita Ratnam Kastoori Rangacharia.

A word about the translator before I close. The Pandit has taken pains to interpret the passages accurately and well, showing thereby his knowledge of Sanskrit and Kannada. The public owe indeed a debt of gratitude to him for the work thus undertaken by him. I venture to hope that the Pandit will try to avoid in his expositions the repetitions of

one and the same idea, the mixing up of translation and elucidation and errors of omission and commission generally of a minor nature which may easily be noticed by effecting a careful revision of the work at the next opportunity.

The public will amply reward the goodly services rendered by the translator by going through the work in their leisure hours and profiting thereby. The book 'Hamsa Sandesa' bears ample testimony to the fact that literary works of the kind, however limited in scope, will give to all thoughtful and intelligent readers good guidance for their conduct in life so that they may be happy in this world and the world to come.

(*Sd.*) ***C. Ramanuja Aiyangar.***
Dt. Educational Officer,
Hassan Dt.

Mysore,
20—9—1938.

|| ಶ್ರೀಃ ||

"ಕರ್ಣಾಟಕ ಹಂಸಸಂದೇಶದ" ಮೂಲಗ್ರಂಥವಾದ, ಸಂಸ್ಕೃತ "ಹಂಸಸಂದೇಶ" ವನ್ನು. ರಚಿಸಿದ, ಕವಿಶ್ರೇಷ್ಠರಾದ ಶ್ರೀ ವೇದಾಂತಾಚಾರ್ಯರ ನಾಮಧೇಯವು, ಆಸೇತು ಹಿಮಾಚಲದವರೆಗೂ ಇರುವ ಬಹುಜನ ಶ್ರೀವೈಷ್ಣವಬ್ರಾಹ್ಮಣರಿಗೆಲ್ಲ, ಭಕ್ತಿಜನಕವಾದದ್ದು. ಆಚಾರ್ಯರು ಆಸ್ತಿಕ ಮಹಾಜನಗಳ ಪುಣ್ಯಸಂಚಯದ ಫಲವೆಂದರೆ ಅತಿಶಯೋಕ್ತಿಯಾಗಲಾರದು. ಇವರ ದಿವ್ಯಚರಿತ್ರೆಯನ್ನು ಇಲ್ಲಿ ವಿವರಿಸಲು ಸಾಧ್ಯವಿಲ್ಲವಾಗಿ, "ಪಾಸಕ ಯವಸ" ನ್ಯಾಯದಿಂದ, ಕೆಲವು ವಿಷಯಗಳನ್ನು ಮಾತ್ರ ಸಂದರ್ಭಕ್ಕೆ ತಕ್ಕಂತೆ ಇಲ್ಲಿ ಸೂಚಿಸಿರುತ್ತೇನೆ.

ಶ್ರೀಮದಾಚಾರ್ಯರು ಶಿಷ್ಟಾಚಾರಯುತವಾದ ಪ್ರಾಚೀನ ಗುರುಕುಲದಲ್ಲಿ ವಿದ್ಯಾಭ್ಯಾಸಮಾಡಿ ತಮ್ಮ ಇಪ್ಪತ್ತನೆಯ ವಯಸ್ಸಿನೊಳಗಾಗಿ, ಸಕಲ ವೇದಶಾಸ್ತ್ರ ಪಾರಂಗತರಾಗಿ, ಸರ್ವಜ್ಞರೆನಿಸಿಕೊಂಡಿದ್ದರು.

"ವಿಂಶತ್ಯಬ್ದೇವಿಶ್ರುತನಾನಾವಿಧವಿದ್ಯಃ ।"
"ತ್ರಿಂಶದ್ವಾರಂ ಶ್ರಾವಿತಶಾರೀರಕಭಾಷ್ಯಃ ॥" ಸಂಕಲ್ಪಸೂರ್ಯೋದಯ.

ಇವರು ಸಾಧಾರಣವಾಗಿ ಮಾನವಕೋಟಿಗೆ ತತ್ಕಾಲದಲ್ಲಿ ತಿಳಿದಿದ್ದ ಎಲ್ಲಾ ಶಾಸ್ತ್ರ ಮತ್ತು ಕಲೆಗಳಮೇಲೂ ಗ್ರಂಥಗಳನ್ನು ಬರೆದಿದ್ದಾರೆ. ಆಚಾರ್ಯರ ಮಾತಾಪಿತೃಗಳು ಅವರಿಗೆ "ವೇಂಕಟನಾಥ" ರೆಂದು ನಾಮಕರಣ ಮಾಡಿದ್ದರು. ವಿದ್ಯಾಗೌರವದಿಂದ ಆಚಾರ್ಯರಿಗೆ ಶ್ರೀ ವೇದಾಂತಾಚಾರ್ಯ, ಸರ್ವತಂತ್ರಸ್ವತಂತ್ರ, ಕವಿತಾರ್ಕಿಕಸಿಂಹ ಇತ್ಯಾದಿ ಬಿರುದುಗಳು ಕೊಡಲ್ಪಟ್ಟಿದ್ದವು. ಸರ್ವರೂ ಇವರಲ್ಲಿ ಪ್ರೀತಿಗೌರವಗಳನ್ನಿಟ್ಟಿದ್ದರೂ ಕೆಲವು ಅಸೂಯಾಪರರು ತೊಂದರೆಪಡಿಸಲು ಪ್ರಯತ್ನಪಟ್ಟರು. ಅದರಿಂದ ಆಚಾರ್ಯರ ಕೀರ್ತಿಯು ಮತ್ತಷ್ಟು ಹೆಚ್ಚಾಯಿತು.

ಒಂದಾವರ್ತಿ ಕೆಲವು ಅಸೂಯಾಪರರು ಒಬ್ಬ ಕಲ್ಲುಕುಟಿಗನನ್ನು ಆಚಾರ್ಯರಮೇಲೆ, ಒಂದು ಭಾವಿಯನ್ನು ರಚಿಸಬೇಕೆಂಬ ಸ್ಪರ್ಧೆಗೆ ಕಳುಹಿಸಿದರು. ರೇಖಾಗಣಿತವು ಕರತಲಾಮಲಕವಾಗಿದ್ದ ಆಚಾರ್ಯರು ಕಲ್ಲುಗಳನ್ನು ಚೂರುಮಾಡದೆ ಸರಿಯಾದ ಪ್ರಮಾಣಕ್ಕೆ ಕುಯ್ದುಕೊಂಡು ಶಾಸ್ತ್ರವತ್ತಾಗಿ ದಿವ್ಯವಾದ ಭಾವಿಯನ್ನು ನಿರ್ಮಿಸಿದರು. ಇದು ಈಹೊತ್ತಿಗೂ ತಿರುವಹೀಂದ್ರ

ಪುರವಲ್ಲಿ ಆಚಾರ್ಯರು ಸ್ಥಾಪಿಸಿದ ಪದ್ಯವೃಂದ ಸಹಿತವಾದ ಶಿಲಾಶಾಸನ ದೊಂದಿಗೆ ಪ್ರೇಕ್ಷಕರಿಗೆ ಕಂಡುಬರುತ್ತದೆ.

ಶ್ರೀ ವೇದಾಂತಾಚಾರ್ಯರ ವೈರಾಗ್ಯವು ಎಣೆಯಿಲ್ಲದುದು. ಇವರು ಅದ್ಭುತವಾದ "ವೈರಾಗ್ಯಪಂಚಕ" ವೆಂಬ ಪದ್ಯಮಾಲಿಯನ್ನು ರಚಿಸಿದ್ದಾರೆ.

ಶ್ರೀಮದಾಚಾರ್ಯರಲ್ಲಿ ಅಪೂರ್ವವಾದ ಪರಮತಸಹನೆಯಿತ್ತು. ಕೇವಲ ಶಾಸ್ತ್ರವ್ಯಾಸಂಗಕ್ಕಾಗಿಯೂ, ತಾನು ಅನುವರ್ತಿಸಿದ್ದ ವಿಶಿಷ್ಟಾದ್ವೈತಸಿದ್ಧಾಂತದ ರಹಸ್ಯವನ್ನು ತಿಳಿಸುವುದಕ್ಕಾಗಿಯೂ ಇವರು ಇತರ ಕೆಲವು ಸಿದ್ಧಾಂತಗಳನ್ನು ಯುಕ್ತಿಯಿಂದ ವಿಮರ್ಶಿಸಿ, ಅಲ್ಲಗಳೆದಿದ್ದಾರೆ. ಶಾಂತಿಸಾಗರರೆಂದರೆ ಇವರು.

ಭಕ್ತಿಯೇ ಶ್ರೀ ವೇದಾಂತಾಚಾರ್ಯರ ಜೀವಿತಸರ್ವಸ್ವವೆನ್ನಬಹುದು. ಅವರು ಶ್ರೀ ಹಯಗ್ರೀವೋಪಾಸಕರು. ಅವರ ಹಯಾನನಸ್ತುತಿಯ ನಾಂದೀ ಶ್ಲೋಕವಾದ,

> ಜ್ಞಾನಾನಂದಮಯಂ ದೇವಂ ನಿರ್ಮಲಸ್ಫಟಿಕಾಕೃತಿಂ ।
> ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ।

ಎಂಬ ಶ್ಲೋಕವು ಪ್ರತಿಮಕ್ಕಳಬಾಯಲ್ಲೂ ಇರುತ್ತದೆ. ಆಚಾರ್ಯರಿಂದ ರಚಿತವಾದ ಸ್ತೋತ್ರಪಾಠಗಳಲ್ಲೂ, ಯಾದವಾಭ್ಯುದಯ, ಸಂಕಲ್ಪ ಸೂರ್ಯೋದಯ, ಇತ್ಯಾದಿ ದೊಡ್ಡಕಾವ್ಯಗಳಲ್ಲೂ ಭಕ್ತಿರಸವು ತುಂಬಿ ತುಳುಕಾಡುತ್ತಿದೆ. ಕವಿತಾಶಕ್ತಿಯನ್ನು ಪರಮಾತ್ಮನ ಸ್ತೋತ್ರಮಾಡುವುದಕ್ಕೇ ಉಪಯೋಗಿಸ ಬೇಕೆಂದೂ, ನರಸ್ತುತಿಮಾಡಬಾರದೆಂದೂ "ವೈರಾಗ್ಯಪಂಚಕ" ದಲ್ಲಿ ಸ್ಪಷ್ಟಪಡಿಸಿದ್ದಾರೆ.

ಶ್ರೀಮದಾಚಾರ್ಯರ ವೇದಾಂತಜ್ಞಾನವು ಅಗಾಧವಾದದ್ದು. ಅಲ್ಲದೆ ವೇದಾಂತಮಾರ್ಗವನ್ನು ಆಚರಣೆಯಲ್ಲಿಟ್ಟುಕೊಂಡು ನಿಜವಾದ ವೇದಾಂತಿ ಗಳಾಗಿದ್ದರು. ಆದುದರಿಂದಲೇ "ವೆಂಕಟನಾಥ" ರೆಂಬ ಅವರ ನಾಮ ಧೇಯವೇ ಮರೆತುಹೋಗಿ ವೇದಾಂತಾಚಾರ್ಯರೆಂಬ ಇವರ ಬಿರುದೇ ಹೆಸರಾಯಿತು.

ಪರಮವೈದಿಕರೂ, ಧರ್ಮಪ್ರಚಾರಕರೂ ಆಗಿದ್ದರೂ ಆಚಾರ್ಯರಲ್ಲಿ ಅದ್ವಿತೀಯವಾದ ಕವಿತಾಶಕ್ತಿಯಿದ್ದಿತು. ಇದು ಅಪರೂಪವಾದದ್ದು. ವೇದಾಂತಿಗಳು ಸಾಮಾನ್ಯವಾಗಿ ಕವಿಗಳಲ್ಲ. ಶ್ರೀ ವೇದಾಂತಾಚಾರ್ಯರಾದರೋ ಕವಿಸಾರ್ವಭೌಮರೆನ್ನಿಸಿಕೊಂಡಿರುವ ಕಾಳಿದಾಸ, ಭವಭೂತಿ ಇತ್ಯಾದಿಗಳೊಡನೆ ಸಂಕೀರ್ತಿತರಾಗಿರುವರು.

> ಮಾಘ ಶ್ಚೋರೋ ಮಯೂರೋ ಮುರರಿಪುರಪರೋ ಭಾರವಿಸ್ಸಾರವಿದ್ಯಃ
> ಶ್ರೀಹರ್ಷಃ ಕಾಳಿದಾಸಃ ಕವಿರಥಭವಭೂತ್ಯಾಹ್ವಯೋ ಭೋಜರಾಜಃ ।
> ಶ್ರೀದಂಡೀ ಡಿಂಡಿಮಾಖ್ಯಃ ಶ್ರುತಿಮುಕುಟಗುರುಃ ಭಲ್ಲಟೋಭಟ್ಟಬಾಣಃ
> ಖ್ಯಾತಾಶ್ಚಾನ್ಯೇ ಶಠಾರ್ಯಾದಯ ಇತಿ ವೈಶ್ವ ಮಾಹ್ಲಾದಯಂತಿ ॥

ವಿಶ್ವಗುಣಾದರ್ಶ ಮಹಾಕಾವ್ಯ.

ಅರ್ಥ:-ಮಾಘ, ಬಿಲ್ಹಣ, ಮಯೂರ, ಮುರಾರಿ, ಭಾರವಿ, ಶ್ರೀಹರ್ಷ, ಕಾಳಿದಾಸ, ಭವಭೂತಿ, ಭೋಜರಾಜ, ದಂಡಿ, ಡಿಂಡಿಮ, ಶ್ರೀ ವೇದಾಂತಾಚಾರ್ಯ, ಭಲ್ಲಟ, ಬಾಣಭಟ್ಟ, ಶಠಾರಿ ಮುಂತಾದ ಕವಿಶ್ರೇಷ್ಠರು ತಮ್ಮ ಸರಸಕವಿತೆಯಿಂದ ಪ್ರಪಂಚವನ್ನು ಆನಂದಪಡಿಸುತ್ತಿದ್ದಾರೆ. ಆಚಾರ್ಯರು ಸರಳ, ಮಧ್ಯಮ, ಪ್ರೌಢ ಈ ಮೂರು ರೀತಿಯ ಸರಣಿಗಳಲ್ಲೂ ಕವಿತೆಯನ್ನು ಮಾಡಿದ್ದಾರೆ.

> ಗೌಡವೈದರ್ಭಪಾಂಚಾಲಮಾಲಾ ಕಾರಾಂಸರಸ್ವತೀಂ ।
> ಯಸ್ಯನಿತ್ಯಂ ಪ್ರಶಂಸಂತಿಸಂತಃ ಸೌರಭವೇದಿನಃ ॥

ಸಂಕಲ್ಪಸೂರ್ಯೋದಯ ನಾಟಕ.

ಅರ್ಥ:—ಗುಣಗ್ರಾಹಿಗಳಾದ ಸತ್ಪುರುಷರು ವೇದಾಂತಾಚಾರ್ಯರ ಗೌಡ ಪಾಂಚಾಲ ವೈದರ್ಭೀರೀತಿಯ ಕವಿತೆಯನ್ನು ಅನವರತವೂ ಕೊಂಡಾಡುತ್ತಾರೆ. ಆಚಾರ್ಯರಿಂದ ರಚಿತವಾದ ನಾನಾರೀತಿಯ ನೂರಿಪ್ಪತ್ತೊಂದು ಗ್ರಂಥಗಳಿಂದಲಾಗಲಿ ಕಾವ್ಯ, ನಾಟಕ, ಗದ್ಯಗ್ರಂಥಾದಿಗಳಾದ ಹತ್ತು ಹದಿನೈದರಿಂದಾಗಲಿ ಪ್ರಕೃತಕ್ಕೆ ಬೇಕಾದ ದೃಷ್ಟಾಂತಗಳನ್ನೆತ್ತಿ ಹೇಳಲು ಸಾಧ್ಯವಿಲ್ಲ. ಮಹಾಕಾವ್ಯವಾದ 'ಯಾದವಾಭ್ಯುದಯ' ವೊಂದನ್ನು ಪರಿಶೀಲಿಸಿದರೆ ಆಚಾರ್ಯರ ಕವಿತೆಯ ಮೇಲ್ಮೆಯು ವ್ಯಕ್ತಪಡುತ್ತದೆ. ನವರಸಭರಿತವೂ,

ವಿವಿಧವೃತ್ತ ಭೂಯಿಷ್ಠವೂ, ನಾನಾಲಂಕಾರ ಭೂಷಿತವೂ ಆದ ಈ ಕಾವ್ಯಕ್ಕೆ ವ್ಯಾಖ್ಯಾನಮಾಡುತ್ತಾ ಅದ್ವೈತವಿದ್ಯಾಚಾರ್ಯ ಶ್ರೀಮದಪ್ಪಯ್ಯ ದೀಕ್ಷಿತರೆಂಬ ಪಂಡಿತೋತ್ತಮರು.

"ಇತ್ಥಂವಿಚಿಂತ್ಯಾ ಸ್ಸರ್ವತ್ರಭಾವಾಸ್ಸಂತಿ ಪದೇಪದೇ।
ಕವಿತಾರ್ಕಿಕಸಿಂಹಸ್ಯ ಕಾವ್ಯೇಷುಲಲಿತೇಷ್ವಪಿ॥" ಎಂದು ಪ್ರಶಂಸಿಸಿದ್ದಾರೆ.

ಅರ್ಥ:—ಕವಿಶ್ರೇಷ್ಠರೂ, ಉದ್ದಾಮತರ್ಕಶಾಸ್ತ್ರ ಪಂಡಿತರೂ ಆದ ಶ್ರೀ ವೇದಾಂತಾಚಾರ್ಯರ ಲಲಿತಕಾವ್ಯಗಳ ಪ್ರತಿಯೊಂದು ಪದ್ಯದಲ್ಲೂ ಇರುವ ಗೂಢಾರ್ಥವನ್ನು ಹೀಗೆ ಯೋಚಿಸಿ ತಿಳಿದುಕೊಳ್ಳಬೇಕು.

ಸ್ವಯಂಕವಿವರ್ಯರೂ, ನಿಷ್ಪಕ್ಷಪಾತಿಗಳೂ ಆದ ಶ್ರೀಮದಾಚಾರ್ಯರಿಗೆ ಕವಿಪುಂಗವನಾದ ಶ್ರೀ ಕಾಳಿದಾಸನಲ್ಲಿ ಬಹಳ ಗೌರವವಿತ್ತು ಇದರ ಪ್ರದರ್ಶನಕ್ಕಾಗಿಯೇ ಶ್ರೀ ಕಾಳಿದಾಸನಿಗೆ ಸಂಭಾವನಾರೂಪವಾಗಿ 'ಮೇಘಸಂದೇಶ'ದ ರೀತಿಯಲ್ಲಿ ತಾನು 'ಹಂಸಸಂದೇಶ'ವನ್ನು ರಚಿಸಿದರು. ಈ ಸಣ್ಣಕಾವ್ಯವು ಸರಳಶೈಲಿಯಲ್ಲಿ, ಮಂದಾಕ್ರಾಂತಾವೃತ್ತದಲ್ಲಿ, ವಿಪ್ರಲಂಭಶೃಂಗಾರರಸಭರಿತವಾಗಿ, ನಾನಾಲಂಕಾರಭೂಷಿತವಾಗಿ, ಈ ಭರತಖಂಡದ ವಿವಿಧ ದೇಶಜನಾಂಗವರ್ಣನಾಯುಕ್ತವಾಗಿ ರಚಿತವಾಗಿದೆ. ಅಶೋಕವನದಲ್ಲಿ ಶ್ರೀ ಸೀತಾದೇವಿಯು ಬಂಧಿತಳಾಗಿ ವಿರಹದಿಂದ ಕೊರಗುತ್ತಾ ಪತಿದರ್ಶನಾಕಾಂಕ್ಷಿಯಾಗಿರುವ ವೃತ್ತಾಂತವನ್ನು ಶ್ರೀ ಆಂಜನೇಯನಿಂದ ತಿಳಿದು ಶ್ರೀರಾಮಚಂದ್ರಮೂರ್ತಿಯು ಲೋಕಮಾತೆಗೆ ಪ್ರೇಮ, ಸಂತಾಪ, ಅಭಯಸೂಚಕವಾದ ಸಂದೇಶವನ್ನು ರಾಜಹಂಸದ ಮೂಲಕ ಹೇಳಿಕಳುಹಿಸಿದುದು ಈ ಕಾವ್ಯದ ಸಾರಾಂಶವು.

ಈ ಕಾವ್ಯದ ಮೊದಲನೇ ಸರ್ಗದ—

ಚೇತೋನ್ಯೈವತ್ಯಜತಿ ಚಪಲಾಮೇಮುಕೋಣಾಭಿಘಾತಾತ್
ಧೀರೋದಾತ್ತಸ್ತಸಿತಜಲದಾತ್ ತಾಂಡವಾರಂಭಸುರ್ಮ್ಮ್ ।
ವಾತೋನ್ಮುಕ್ತೈಃ ಕುಟಜಕುಸುಮೈಃ ವಾಸಿತೇಶೈಲಶೃಂಗೇ
ರಕ್ಷಃಪೀಡಾರಚಿತದಯಿತಾಶ್ಲೇಷಧನ್ಯೋಮಯೂರಃ ॥

ಈ ಶ್ಲೋಕದಲ್ಲಿ ಕೊಟ್ಟಿರುವ ಮಯೂರ ನೃತ್ಯದ ವರ್ಣನೆಯೂ, ಅದೇ ಸರ್ಗದ—

ಸ್ರಸ್ತಾಪೀಡಂ ಪ್ರಚಲದಲಕಂ ವ್ಯಕ್ತತಾಟಂಕರತ್ನಂ
ಮುಕ್ತಾಚೂರ್ಣಸ್ಫುರಿತತಿಲಕಂ ವಕ್ತ್ರಮುತ್ತಾನಯಂತ್ಯಃ ।
ದೇಶೇತಸ್ಮಿನ್ ಕುವಲಯದೃಶೋ ಜಾತಕೌತೂಹಲಾಸ್ತ್ವಾಂ
ಮೂಲಾದೀರ್ಘೈರ್ಮಧುರವಿರುತಂ ಮಾನಯಿಷ್ಯಂತ್ಯಪಾಂಗೈಃ ॥

ಶ್ಲೋ॥ ಕುರ್ವನ್ನಾನಾಕುಸುಮ ರಜಸಾಯತ್ರಚಿತ್ರಂ ವಿತಾನಂ
ಪೂಗಾರಣ್ಯೇ ಮೃದುವಿಚಲಯನ್ ಪಾಳಿಕಾಚಾಮರಾಣಿ ।
ಪಾದನ್ಯಾಸಕ್ಷಮಮುಪಕಿರನ್ ಕ್ಷ್ಮಾತಲಂ ಪುಷ್ಪಜಾಲೈಃ
ಪ್ರಾಯೋವಾಯುಃ ಪರಿಜನವಿಧಿಂಪಂಚಬಾಣಸ್ಯಧತ್ತೇ ॥

ಎಂಬಲ್ಲಿ ಕೊಟ್ಟಿರುವ ಉದ್ಯಾನ ಮಂದಮಾರುತವರ್ಣನೆಯೂ, ಅದೇ ಸರ್ಗದ—

ಯತ್ರಾಸನ್ನೇಪಯಸಿಜಲಧೇಃ ತ್ವತ್ಪ್ರತಿಚ್ಛಂದಚಂದ್ರಾಃ
ಪಕ್ಷಚ್ಛೇದಕ್ಷರಿತರುಧಿರಸ್ತೋಮ ಸಂದರ್ಶನೀಯಾಃ ।
ವೀಚೀಪ್ರಾಪ್ತೈಃ ವಿಷಮಿತರುಚೋಮೌಕ್ತಿಕೈಃ ತಾರಕಾಭೈಃ
ಸಂಧ್ಯಾಮಸ್ಯಾಂ ನಿಯತಮವನೌದರ್ಶಯಂತಿ ಪ್ರವಾಳಾಃ ॥

ಎಂಬಲ್ಲಿ ಕೊಟ್ಟಿರುವ ಸಮುದ್ರ ಪ್ರವಾಳ ವರ್ಣನೆಯೂ ಸಾಹಿತ್ಯ ಪ್ರಿಯನಾದ ಯಾವ ವಿದ್ವಾಂಸನಿಗೆತಾನೆ ಆನಂದವನ್ನುಂಟುಮಾಡಲಾರದು! ದ್ವಿಸರ್ಗಾತ್ಮಕವಾದ ಹಂಸಸಂದೇಶವು ದ್ವಿಧಾರಾತ್ಮಕವಾದ ಮುಕ್ತಾಹಾರವೇ ಎನ್ನಬಹುದು.

ಇಂತಹ ಕಾವ್ಯರತ್ನಕ್ಕೆ ಕನ್ನಡಭಾಷಾಂತರವಿಲ್ಲದ್ದರಿಂದ ಜನಸಾಮಾನ್ಯದಲ್ಲಿ ಪ್ರಚಾರವಿಲ್ಲದೆಯೇ ಇದ್ದಿತು. ಪ್ರಕೃತ, ಪಂಡಿತೋತ್ತಮರೂ, ನನ್ನ ಮಾನ್ಯಮಿತ್ರರೂ, ಮೈಸೂರು ಮರಿಮಲ್ಲಪ್ಪನವರ ಹೈಸ್ಕೂಲು ಉಪಾಧ್ಯಾಯರೂ, ಆದ ವಿದ್ವಾನ್ ಶ್ರೀ ಗೋಪಾಲಕೃಷ್ಣಮಾಚಾರ್ಯರು 'ಹಂಸ ಸಂದೇಶ' ವನ್ನು ಕನ್ನಡಿಸಿ ಪ್ರಕಟಿಸುವುದರ ಮೂಲಕ ತಮ್ಮ ಪೂಜ್ಯ ಗುರುಗಳಾದ ಶ್ರೀ ವೇದಾಂತಾಚಾರ್ಯರ ಧವಳಕೀರ್ತಿಯನ್ನು ಮತ್ತಷ್ಟು

ಪ್ರಕಾಶಗೊಳಿಸಿ, ಅವರಿಗೆ ಗುರುದಕ್ಷಿಣೆಯನ್ನು ಸಮರ್ಪಿಸಿ ಪರಮಾನುಗ್ರಹಕ್ಕೆ ಪಾತ್ರರಾದುದಲ್ಲದೆ, ಸಂಸ್ಕೃತ, ಕರ್ಣಾಟಕ ಭಾಷಾಭಿಮಾನಿಗಳಿಗೆ ಮಹದುಪಕಾರವನ್ನೇ ಮಾಡಿರುತ್ತಾರೆ. ಗ್ರಂಥವೇ ವಾಚಕರ ಹಸ್ತಗತವಾಗಿರುವುದರಿಂದ ಅದರ ಗುಣಾಧಿಕ್ಯತೆಯ ವಿಷಯವಾಗಿ ನಾನೇನೂ ಲಂಬಿಸಬೇಕಾದ್ದಿಲ್ಲ. ಗುಣಗ್ರಾಹಿಗಳಾದ ವಾಚಕಮಹನೀಯರು 'ಕರ್ಣಾಟಕ ಹಂಸಸಂದೇಶ'ವನ್ನು ಪರಾಂಬರಿಸಿ ಪ್ರಯೋಜನಹೊಂದಿದರೆ ನಿಷ್ಕಾಮಕರ್ಮವೆಂದು ಭಾವಿಸಿ ಕನ್ನಡಕ್ಕೆ ತಂದಿರುವ ನಮ್ಮ ಮಾನ್ಯಮಿತ್ರರ ಶ್ರಮವು ಸಾರ್ಥಕವಾಗುವುದು.

ಈ ಸಂದರ್ಭದಲ್ಲಿ ಅಲ್ಪಜ್ಞನಾದ ನನ್ನನ್ನು ಈ ಗ್ರಂಥಕ್ಕೆ ಮುನ್ನುಡಿಯನ್ನು ಬರೆಯಬೇಕೆಂದು ಪರಮವಿಶ್ವಾಸದಿಂದ ಕೇಳಿ ತನ್ಮೂಲಕ ಸರ್ವದಾ ನನಗೆ ಆರಾಧ್ಯಮೂರ್ತಿಗಳಾಗಿರುವ ಶ್ರೀ ವೇದಾಂತಾಚಾರ್ಯರ ಸೇವೆಯನ್ನು ಅಣುಪ್ರಮಾಣದಷ್ಟು ಮಾಡಲು ಅವಕಾಶ ಕಲ್ಪಿಸಿಕೊಟ್ಟುದಕ್ಕಾಗಿ ಗ್ರಂಥಕರ್ತರಿಗೆ ನಾನು ಚಿರಋಣಿಯಾಗಿರುವೆನು.

ಸಜ್ಜನವಿಧೇಯ,

18—8—38.

**ಕೆ. ಶೇಷಾದ್ರ್ಯಯ್ಯಂಗಾರ್,**

ಬಿ.ಎ., ಎಲ್.ಎಲ್.ಬಿ.,

ಅಡ್ವೊಕೇಟ್, ಮೈಸೂರು.

# ಪೀಠಿಕೆ.

ಆಪ್ತಸಮೂಲಕ ಆಪ್ತರಿಗೆ, (ಗಿಳಿ, ಹಂಸ ಮೊದಲಾದುವುಗಳ ಮೂಲಕ) ಹೇಳಿಕಳುಹಿಸುವ ಮಾತುಗಳು ಸಂದೇಶವು.

ಶ್ರೀರಾಮನು ಹನುಮಂತನಮೂಲಕ ಸೀತೆಗೆ ಸಂದೇಶಕಳು ಹಿಸಿರುವುದು ವಾಲ್ಮೀಕಿ ರಾಮಾಯಣದ ಸುಂದರಕಾಂಡದಲ್ಲಿ ಸ್ಪಷ್ಟ ವಾಗಿದೆ.

ವ್ಯಾಸಋಷಿಗಳ ಮಹಾಭಾರತದಲ್ಲಿ ನಳಮಹಾರಾಜನು ಹಂಸ ದಮೂಲಕ ದಮಯಂತಿಗೆ ಸಮಾಚಾರ ಹೇಳಿಕಳುಹಿಸಿದ್ದು ಲೋಕ ಪ್ರಸಿದ್ಧವಾಗಿದೆ. ಇದಾದಮೇಲೆ ಮಹಾಕವಿ ಕಾಳಿದಾಸನು, ರಾಮನು ಸೀತೆಗೆ ಹನುಮಂತನ ಮೂಲಕ ಸಮಾಚಾರ ಹೇಳಿಕಳು ಹಿಸಿದ್ದನ್ನು ಮಾದರಿಯಾಗಿಟ್ಟುಕೊಂಡು, ಯಕ್ಷನು ಮೇಘದ ಮೂಲಕ ತನ್ನ ಪತ್ನಿಗೆ ಸಂದೇಶ ಹೇಳಿಕಳುಹಿಸಿದನೆಂಬುದಾಗಿ ಕಲ್ಪಿಸಿ ಮೇಘಸಂದೇಶವನ್ನು ಬರೆದು ಇದ್ದಾನೆ. ಅನಂತರ ಮಹಾಕವಿ ಶ್ರೀ ವೆಂಕಟನಾಥರು (ವೆಂಕಟೇಶರು) ಸೀತೆಯ ಸಮಾಚಾರವನ್ನು ಹನುಮಂತನು ರಾಮನಿಗೆ ತಿಳಿಸಿದಮೇಲೆ, ಆ ರಾಮನು ಹಂಸದ ಮೂಲಕ ಸೀತೆಗೆ ಸಂದೇಶವನ್ನು ಕಳುಹಿಸಿಕೊಟ್ಟನೆಂಬುದು ಈ "ಹಂಸಸಂದೇಶ" ದಲ್ಲಿ ಪ್ರತಿಪಾದ್ಯವಾದ ವಿಷಯವಾಗಿದೆ. ಇದ ರಂತೆಯೇ ಕೋಕಿಲಶುಕಮರುತ್ಸಂದೇಶಗಳೂ ಒಬ್ಬೊಬ್ಬ ಕವಿಯಿಂದ ರಚಿತವಾಗಿವೆ. ಆದರೆ ಇವುಗಳು ಪ್ರಚಾರವಾಗಿಲ್ಲ.

ದಕ್ಷಿಣದೇಶದ ಸುಪ್ರಸಿದ್ಧರಾದ ರಾಜರುಗಳಲ್ಲಿ ಪ್ರಾಚೀನ ಕಾಲದ ಚೋಳದೇಶದ ರಾಜರೂ ಸೇರಿದ್ದರು. ಇವರಲ್ಲಿ, ದಕ್ಷಿಣ ಹಿಂದೂದೇಶ, ಉತ್ತರದಲ್ಲಿ ಗಂಗಾನದಿಯವರೆಗೆ, ಇನ್ನೂ ದಕ್ಷಿಣದಲ್ಲಿ

ಸಿಂಹಳಪೂರ್ತಿ, ಪೂರ್ವದಲ್ಲಿ ಸಮುದ್ರಕ್ಕಾಚೆ ಬರ್ಮಾದೇಶವನ್ನೂ ಗೆದ್ದಿದ್ದವನು ರಾಜರಾಜ ಚೋಳನು. ಇವನು ಕ್ರಿ. ಶ. 985-1013 ವರೆಗೆ ಆಳಿದನು. ಇವನಾದಮೇಲೆ ಬಂದವನು ಒಂದನೆಯ ರಾಜೇಂದ್ರಚೋಳನು. ಇವನು (ಕ್ರಿ. ಶ. 1013-1043) ಹಿಂದಿನ ರಾಜನಿಗಿಂತ ಎಲ್ಲಭಾಗಗಳಲ್ಲೂ ಉತ್ತಮನು. ಇವರ ಕಾಲದಲ್ಲೇ ಶ್ರೀ ಯಾಮುನಾಚಾರ್ಯರು ಆಸ್ಥಾನದಲ್ಲಿ ಮಹಾ ಪ್ರಬಲರಾದರು. ತಮ್ಮ ಪಾಂಡಿತ್ಯವಾದಸಾಮರ್ಥ್ಯಗಳಿಂದ ರಾಜನಿಗೂ ರಾಣಿಗೂ ಆಪ್ತತಮರಾಗಿ ಗೌರವಿಸಲ್ಪಟ್ಟರು. ಇವರಿಗೆ ಮರ್ಯಾದಾರ್ಥವಾಗಿ ಅನೇಕ ಗ್ರಾಮಗಳು ಕೊಡಲ್ಪಟ್ಟವು. ಈ ಮಹಾಮಹಿಮರ ದೌಹಿತ್ರ ಸಂತತಿಯವರೇ ಶ್ರೀ ರಾಮಾನುಜಾಚಾರ್ಯರು. ಇವರು ಕ್ರಿ. ಶ. 1017 ರಲ್ಲಿ ಅವತರಿಸಿದರು. ವಿದ್ಯಾಭ್ಯಾಸ ಮುಗಿದಮೇಲೆ ಯಾಮುನಾಚಾರ್ಯರ ಅಪ್ಪಣೆಯಂತೆ ಮತಪ್ರಚಾರಮಾಡಿ ಶ್ರೀ ಭಾಷ್ಯಾದಿ ಗ್ರಂಥಗಳನ್ನು ರಚಿಸಿದರು. ಆಗ ಆ ದೇಶದ ಚಕ್ರವರ್ತಿಯಾದ ೧ನೆಯ ಕುಲೋತ್ತುಂಗ ಚೋಳನಿಂದ ಇವರಿಗೆ ಹಿಂಸೆ ಹೆಚ್ಚಿ ಶ್ರೀ ರಂಗದಿಂದ ಕಾವೇರೀತೀರದಲ್ಲೇ ಮೈಸೂರು ದೇಶಕ್ಕೆ ಆಗಮಿಸಿದರು. ಇವರು ಈ ದೇಶದಲ್ಲಿ ತಲಕಾಡು, ಸಾಲಿಗ್ರಾಮ, ತೊಂಡನೂರು, ಮೇಲುಕೋಟೆ, ಬೇಲೂರು, ಶ್ರವಣಬೆಳುಗೊಳ, ಗದಗು ಮೊದಲಾದ ಸ್ಥಳಗಳಲ್ಲಿ ಸಂಚರಿಸಿದರು ಮತ್ತು ಇಲ್ಲಿಗೆ ಮಹಾಮಂಡಲೇಶ್ವರನಾಗಿದ್ದ ಬಿಟ್ಟಿದೇವನಿಗೆ ಅವನ ಪ್ರಾರ್ಥನೆಯಂತೆ ಶ್ರೀ ವೈಷ್ಣವಮತವನ್ನು ಉಪದೇಶಮಾಡಿದರು. ಇವರು ಮೈಸೂರುದೇಶದಲ್ಲಿ ಇಪ್ಪತ್ತೈದು ವರ್ಷಗಳಕಾಲ ನೆಲೆಸಿದ್ದು ತಮ್ಮ ತತ್ವವನ್ನು ಸರ್ವತೋಮುಖವಾಗಿ ಪ್ರಚಾರಮಾಡಿದರು. ಇವರ ಎಪ್ಪತ್ತುನಾಲ್ಕು ಜನ ಸುಪ್ರಸಿದ್ಧ ಶಿಷ್ಯ ಪರಂಪರೆಯಲ್ಲಿ ಆತ್ರೇಯರಾಮಾನುಜಾಚಾರ್ಯರೆಂಬುವರು ಸುಪ್ರಸಿದ್ಧ ಮಹಾಪಂಡಿತರಾಗಿದ್ದರು. ಇವರ ಸಹೋದರಿಯ ಗಂಡನು

ಅನಂತಸೂರಿಯೆಂಬುವನು. ಈತನ ಸುಪುತ್ರರೇ ಶ್ರೀ ವೆಂಕಟನಾಥನು. ಈತನು ತನ್ನ ಸೋದರಮಾವ ಆತ್ರೇಯರಾಮಾನುಜಾಚಾರ್ಯರಿಂದಲೇ ಎಲ್ಲ ಶಾಸ್ತ್ರಗಳಲ್ಲೂ ಪರಿಪೂರ್ಣ ಪಾಂಡಿತ್ಯವನ್ನು ಪಡೆದವನು. ಈತನು 1309 ನೆಯ ಇಸವಿಯಲ್ಲಿ ಶ್ರೀರಂಗವು ಮುಸಲ್ಮಾನರಿಂದ ಲೂಟಿಮಾಡಲ್ಪಟ್ಟಾಗ ಮಹನೀಯರಾದ ಸುದರ್ಶನಾಚಾರ್ಯರ ಅಪೇಕ್ಷೆಯಂತೆ ಅವರ ಇಬ್ಬರುಮಕ್ಕಳು ಮತ್ತು ಆ ಸುದರ್ಶನಾಚಾರ್ಯರಿಂದ ರಚಿತವಾದ "ಶ್ರುತಪ್ರಕಾಶಿಕಾ" ಮುಂತಾದ ವೇದಾಂತಗ್ರಂಥಗಳ ಸಮೇತ ಕಾವೇರೀತೀರದ ಮೂಲಕ ಮೈಸೂರು ದೇಶಕ್ಕೆ ಬಂದು ಬಹುಕಾಲವಿದ್ದು ಅನಂತರ ಶ್ರೀರಂಗಕ್ಕೆ ಹಿಂದಿರುಗಿದನು. ಇವರು ಆಗಿನಕಾಲದಲ್ಲಿ ಪ್ರಚಾರದಲ್ಲಿದ್ದ ಎಲ್ಲಶಾಸ್ತ್ರಗಳಲ್ಲೂ ಪರಿಪೂರ್ಣವಾದ ಪಾಂಡಿತ್ಯವನ್ನು ಸಂಪಾದಿಸಿದ್ದರು. ಇವರು ಸಂಸ್ಕೃತ, ತಮಿಳುಭಾಷೆಗಳಲ್ಲಿ ಗದ್ಯಪದ್ಯಾತ್ಮಕವಾದ ಗ್ರಂಥಗಳನ್ನು ರಚಿಸಿರುತ್ತಾರೆ. ಇವರಿಂದ ರಚಿತವಾದ ಎಲ್ಲ ಗ್ರಂಥಗಳಲ್ಲೂ ಇವರ ಸರ್ವಶಾಸ್ತ್ರಗಳ ಪಾಂಡಿತ್ಯವನ್ನು ನೋಡಬಹುದಾದರೂ ತರ್ಕಶಾಸ್ತ್ರದ ನಿಪುಣತೆಯನ್ನು ಹೆಚ್ಚಾಗಿ ತತ್ವಮುಕ್ತಾಕಲಾಪ, ನ್ಯಾಯಸಿದ್ಧಾಂಜನಗಳಲ್ಲೂ, ವೇದಾಂತಶಾಸ್ತ್ರದ ಅಪರಿಮಿತವಾದ ಪಾಂಡಿತ್ಯವನ್ನು ತತ್ವಟೀಕೆ, ರಹಸ್ಯತ್ರಯಸಾರ, ಗೀತಾತಾತ್ಪರ್ಯಚಂದ್ರಿಕೆಗಳಲ್ಲೂ, ಸಾಹಿತ್ಯಜ್ಞಾನವನ್ನು ಸಂಕಲ್ಪಸೂರ್ಯೋದಯ, ಸುಭಾಷಿತನೀವಿ, ಯಾದವಾಭ್ಯುದಯ ಹಂಸಸಂದೇಶಗಳಲ್ಲೂ, ಭಕ್ತ್ಯತಿಶಯವನ್ನು ದಯಾಶತಕ ಅಚ್ಯುತಶತಕ ತಾತ್ಪರ್ಯರತ್ನಾವಲೀ ಯತಿರಾಜ ಸಪ್ತತಿಗಳಲ್ಲೂ ನಾವು ಕಾಣಬಹುದು.

ವೇದಾಂತಾಚಾರ್ಯರು ಸಂಸ್ಕೃತಮಹಾಕವಿಗಳಲ್ಲಿ ಒಬ್ಬರು. ಇವರು ತಮ್ಮ ಅದ್ಭುತಪಾಂಡಿತ್ಯವನ್ನೂ ಕವಿತಾ ಪ್ರತಿಭೆಯನ್ನೂ ಸಂಪೂರ್ಣವಾಗಿ ಆಧ್ಯಾತ್ಮ ವಿಷಯಗಳಲ್ಲೇ ಉಪಯೋಗಿಸಿ ಅತ್ಯು

ತ್ತಮ ವಿಶಿಷ್ಟಾದ್ವೈತಸಿದ್ಧಾಂತಗ್ರಂಥಗಳನ್ನೂ, ಭಕ್ತಿರಸಪರಿಪೂರ್ಣ ನಾದ ಸ್ತೋತ್ರಗಳನ್ನೂ ರಚಿಸಿರುವರಾದರೂ, ಕೇವಲ ಸಾಹಿತ್ಯ ದೃಷ್ಟಿಯಿಂದ ನೋಡುವುದಾದರೂ ಅತ್ಯುತ್ತಮ ಗ್ರಂಥಗಳ ಗೋಷ್ಠಿಗೆ ಸೇರಿಸಬಹುದಾದ ಸಂಕಲ್ಪಸೂರ್ಯೋದಯ ನಾಟಕ, ಹಂಸ ಸಂದೇಶಕಾವ್ಯ ಇವುಗಳನ್ನು ರಚಿಸಿ ಪ್ರಸಿದ್ಧಿಪಡೆದಿದ್ದಾರೆ. ಇವರೇ ಒಂದೆಡೆಯಲ್ಲಿ ತಿಳಿಸಿರುವಂತೆ ಸಂಸ್ಕೃತಕಾವ್ಯಗಳಲ್ಲಿರತಕ್ಕ ಗೌಡ, ವೈದರ್ಭ, ಪಾಂಚಾಲವೆಂಬ ಮೂರು ಪ್ರಭೇದಗಳಲ್ಲೂ ನಿರಾಯಾಸ ವಾಗಿ ಕವಿತೆಮಾಡುವ ಶಕ್ತಿಯುಳ್ಳವರಾಗಿ ಪ್ರಸಿದ್ಧಿಪಡೆದಿದ್ದಾರೆ. ಇವರ ಗ್ರಂಥದ ಪ್ರತಿಯೊಂದು ಪಙ್ಕ್ತಿಯೂ, ಪ್ರತಿಪದವೂ ಬಹಳ ಮನೋಹರವಾಗಿಯೂ, ಅರ್ಥಗರ್ಭಿತವಾಗಿಯೂ ಪಾಠಕರ ಮನಸ್ಸನ್ನು ಆಕರ್ಷಿಸುವಂಥದಾಗಿಯೂ ಇರುತ್ತದೆ. ಅನ್ಯಮತೀಯ ರಾದ ಪ್ರಸಿದ್ಧಪಂಡಿತರೂ ವ್ಯಾಖ್ಯಾನಕಾರರೂ ಆದ ಅಪ್ಪಯ್ಯ ದೀಕ್ಷಿತರು, ಇವರ ವಿಷಯದಲ್ಲಿ "ಕಾವ್ಯೇಷುಲಲಿತೇಷ್ವಪಿ" ಎಂದು ಹೇಳಿರುವುದರಿಂದಲೇ ಇವರ ಗ್ರಂಥಗಳು ಎಷ್ಟು ಮನೋಹರವಾಗಿಯೂ ಅರ್ಥಗರ್ಭಿತವಾಗಿಯೂ ಇರುತ್ತವೆಂಬುದನ್ನು ಊಹಿಸ ಬಹುದಾಗಿದೆ. ಪ್ರಕೃತ ಇವರ ಹಂಸಸಂದೇಶಕಾವ್ಯ ವಿಷಯವನ್ನು ಸ್ವಲ್ಪ ವಿಚಾರಮಾಡೋಣ.

ದೂತವಾಕ್ಯಪ್ರಕರಣಗಳು ಸಂಸ್ಕೃತಕವಿಗಳಿಗೆ ಹೊಸದೇನೂ ಅಲ್ಲ. ಆದಿಕವಿವಾಲ್ಮೀಕಿಯ ಪ್ರಸಿದ್ಧವಾದ ರಾಮಾಯಣದ ಅತ್ಯುತ್ತಮಭಾಗವೆಂದರೆ "ಹನುಮತ್ಸಂದೇಶ"ವೇ ಆಗಿದೆ. ಇದರ ಸವಿಯನ್ನು ಸವಿದೇ ಮಹಾಕವಿ ಕಾಳಿದಾಸನು ತನ್ನ ಜಗತ್ಪ್ರಸಿದ್ಧ ಮೇಘದೂತಕಾವ್ಯವನ್ನು ರಚಿಸಿದಾನೆಂದು ನಿಸ್ಸಂದೇಹವಾಗಿ ಅನೇಕ ಕಾವ್ಯದ ಆಧಾರಗಳಿಂದಲೇ ಹೇಳಬಹುದು. ಆದರೂ ಕಾಳಿದಾಸನು ಆರಿಸಿಕೊಂಡ ಕಥಾವಸ್ತುವು ಕೇವಲ ಒಂದು ಸಾಮಾನ್ಯವಿಷಯ

ವಾಗಿದೆ. ಧೀರೋದಾತ್ತಗುಣಗಳಿಂದ ಕೂಡಿದ ಉತ್ತಮನಾಯ
ಕನ ವಿಷಯವಾಗಿಲ್ಲ. ಅಧಿಕಾರಪ್ರಮತ್ತನಾದ ಯಕ್ಷನು ಶಾಪ
ಗ್ರಸ್ತನಾಗಿ ಪ್ರಿಯಪತ್ನಿಯನ್ನಗಲಿ, ಕೈಲಾಸಪರ್ವತದಿಂದ ಬಹು
ದೂರ ದಕ್ಷಿಣಕ್ಕೆ ಹೋಗಿ ಅಲ್ಲಿ ಕಾಲಹರಣಮಾಡುತ್ತಿದ್ದಾನೆ. ವರ್ಷಾ
ಕಾಲದ ಮೇಘಗಳು ಉತ್ತರದಿಕ್ಕಿಗೆ ಪ್ರಯಾಣಮಾಡುತ್ತಿರುವುದನ್ನು
ನೋಡಿ, ಪ್ರಿಯಪತ್ನಿಯನ್ನು ಜ್ಞಾಪಿಸಿಕೊಂಡು, ವಿರಹಯಾತನೆ
ಯನ್ನು ತಾಳಲಾರದೆ, ಉದ್ವಿಗ್ನನಾಗಿ ತನ್ನ ಪ್ರೇಮಸಂದೇಶವನ್ನು
ಪ್ರಿಯಪತ್ನಿಗೆ ತಿಳಿಸಬೇಕೆಂದು ಮೇಘವನ್ನು ಪ್ರಾರ್ಥಿಸಿಕೊಳ್ಳುತ್ತಾನೆ.
ಅದರಂತೆಯೇ ಮೇಘವು ದೂತಕಾರ್ಯವನ್ನೆಸಗಿ ಅವನ ಪ್ರಿಯಪತ್ನಿಗೆ
ಸಮಾಧಾನಹೇಳುತ್ತದೆ. ಕಥಾವಿಷಯವು ಹೀಗೆ ಸಾಮಾನ್ಯವಾಗಿ
ದ್ದರೂ ಕವಿಯು ತನ್ನ ಅದ್ಭುತವರ್ಣನಾಸಾಮರ್ಥ್ಯದಿಂದಲೇ ಲೋ
ಕವನ್ನೇ ಮೋಹಗೊಳಿಸುವಂಥ ಸುಂದರಕಾವ್ಯವನ್ನು ರಚಿಸಿದ್ದಾನೆ.
ಇದನ್ನು ಓದಿ, ಆನಂದಿಸಿ, ಇದರ ಸೌಂದರ್ಯಕ್ಕೆ ಮೆಚ್ಚಿದವರಾಗಿಯೇ
ವೇದಾಂತಾಚಾರ್ಯರು ತಮ್ಮ ಹಂಸಸಂದೇಶವನ್ನು ರಚಿಸಿದ್ದು.
ಸಂಪೂರ್ಣವಾಗಿಯೂ ಮೊದಲಿಂದ ಕೊನೆಯವರೆಗೂ ಎಲ್ಲ ವಿಷಯ
ಗಳಲ್ಲೂ ಮೇಘಸಂದೇಶದ ಸರಣಿಯನ್ನೇ ಅನುಸರಿಸಿರುತ್ತಾರೆ.
ಆದರೂ ಹಂಸಸಂದೇಶವು ಕೇವಲ ಅನುಕರಣಗ್ರಂಥವೆಂದು ಉದಾ
ಸೀನಯೋಗ್ಯವಾಗುವುದಕ್ಕೆ ಬದಲಾಗಿ ಮೇಘಸಂದೇಶಕ್ಕೆ ಯಾವ
ರೀತಿಯಲ್ಲೂ ಕಡಿಮೆಯಲ್ಲದ, ಅನೇಕಕಡೆಗಳಲ್ಲಿ ಅದಕ್ಕಿಂತಲೂ
ಹೆಚ್ಚು ಔಚಿತ್ಯಪಡೆದ ಸನ್ನಿವೇಶಗಳಿಂದ ಕೂಡಿ ಅಷ್ಟೇ ಮನೋಹರ
ವಾದ ವರ್ಣನಾದಿಗಳಿಂದ ಕೂಡಿದ, ಪ್ರಪಂಚದ ಉತ್ತಮೋತ್ತಮ
ಕಾವ್ಯಗಳಲ್ಲಿ ಒಂದಾಗಿದೆ. ಈ ಅಂಶವನ್ನು ಮೇಲಿನ ಎರಡು
ಗ್ರಂಥಗಳನ್ನು ತುಲನಾತ್ಮಕದೃಷ್ಟಿಯಿಂದ ಪರಿಶೀಲಿಸಿದರೆ ಸ್ಪಷ್ಟ
ವಾಗುತ್ತದೆ.

ಮೇಘಸಂದೇಶದಲ್ಲಿ ವರ್ಷಾಕಾಲದ ಕಾರ್ಮೋಡವನ್ನು ಕವಿಯು ದೂತಕಾರ್ಯಕ್ಕೆ ಆರಿಸಿದ್ದಾನೆ. ಅದು, ಮಳೆ, ಪ್ರವಾಹ, ಕಲಕಲ್ಪಟ್ಟ ನೀರು ಇವುಗಳನ್ನು ಸೂಚಿಸುವಂತೆಯೇ ಶಾಪಗ್ರಸ್ತನಾದ ಯಕ್ಷನ, ಪತ್ನೀವಿರಹದಿಂದುಂಟಾದ ಮನೋವೈಕಲ್ಯ, ದುಃಖ ಇವುಗಳನ್ನು ಸೂಚಿಸಿ, ಅವನಿಗೆ ತಕ್ಕ ದೂತನಾದಂತಿದೆ. ಹಂಸ ಸಂದೇಶದಲ್ಲಾದರೋ ಕಾಲವು ಸ್ವಚ್ಛವಾದ ಶರದೃತು. ದೂತಕಾರ್ಯಕ್ಕೆ ಪ್ರಶಾಂತಮನೋಭಾವವನ್ನು ಸೂಚಿಸುವ ಬಿಳಿಯಬಣ್ಣವುಳ್ಳ ಹಂಸವು ಹೊರಟಿದೆ. ಬಿಳಿದಾಗಿಯೂ ನಿರ್ಮಲವಾಗಿಯೂ ಇರುವ ಎರಡುರೆಕ್ಕೆಗಳೊಡನೆ ಹಾರುವ ಹಂಸವು ಭಗವಂತನ ಕರುಣೆಗೆ ಪಾತ್ರನಾಗಲು ಜೀವನಿಗೆ ಮುಖ್ಯದ್ವಾರನಾದ ಶುದ್ಧಸತ್ವಗುಣ ಪ್ರಧಾನನೂ, ಜ್ಞಾನ ಕರ್ಮಗಳೆಂಬ ಎರಡು ರೆಕ್ಕೆಗಳನ್ನು ಹೊಂದಿರುವವನೂ ಆಗಿರುವ ಗುರು (ಪರಮಹಂಸ) ವನ್ನು ಸೂಚಿಸುತ್ತದೆ.

ಮೇಘಸಂದೇಶದ ಕಥಾನಾಯಕನು ಕರ್ತವ್ಯಭ್ರಷ್ಟತೆಯಿಂದ ಶಾಪಗ್ರಸ್ತನಾಗಿರುವ ಯಕ್ಷ. ಹಂಸಸಂದೇಶದಲ್ಲಾದರೋ ಅತ್ಯಂತ ಶ್ರೇಷ್ಠವಾದ ಸೂರ್ಯವಂಶದಲ್ಲಿ ಜನಿಸಿದ, ಪಿತೃವಾಕ್ಯಪರಿಪಾಲನೆಯೇ ಆದಿಯಾದ ಸಕಲ ಸದ್ಗುಣಪರಿಪೂರ್ಣನಾದ ರಾಮಚಂದ್ರನು ನಾಯಕನು. ಮೇಘಸಂದೇಶಕಾವ್ಯದಲ್ಲಿ ಪತ್ನೀವಿರಹದಿಂದ ಅತ್ಯಂತ ದುಃಖಿತನಾಗಿ ಮೇಘದೊಡನೆ ಸಂದೇಶವನ್ನು ಪ್ರಿಯಪತ್ನಿಗೆ ಕಳುಹಿಸುತ್ತಾನೆ. ಹಂಸಸಂದೇಶದಲ್ಲಾದರೋ ದುಷ್ಟಶಿಕ್ಷಣ ಶಿಷ್ಟ ಪರಿಪಾಲನಾರ್ಥವಾಗಿಯೇ ರಾಮನು ಸೀತೆಯನ್ನು ಕಳೆದುಕೊಂಡು ಅವಳಿಗೆ ತಾನು ಶೀಘ್ರವೇ ಬಂದು ಅವಳ ಬಂಧನವನ್ನು ಬಿಡಿಸುವುದಾಗಿ ಸಂದೇಶವನ್ನು ಕಳುಹಿಸುತ್ತಾನೆ. ವಿಶಿಷ್ಟಾದ್ವೈತಸಿದ್ಧಾಂತ ಪ್ರಕಾರ, ಜೀವನು ಮೋಕ್ಷಹೊಂದಲು ಕಾತುರನಾಗಿರುವುದಕ್ಕಿಂತಲೂ, ಪರಮಾತ್ಮನೇ ಆರ್ತನಾದ ಭಕ್ತ ಜೀವನನ್ನು ಉದ್ಧರಿಸಲು

ಹೆಚ್ಚು ಆಸಕ್ತನಾಗಿರುತ್ತಾನೆ. ರಾವಣನಿಂದ ಸೆರೆಯುಡಲ್ಪಟ್ಟಿರುವ ಸೀತೆಯು ಸಂಸಾರವೆಂಬ ಘೋರರಾಕ್ಷಸನ ಕೈಯ್ಯಲ್ಲಿಸಿಕ್ಕಿರುವ ಬದ್ಧಜೀವನನ್ನೇ ಸೂಚಿಸುತ್ತಾಳೆ. ಪರಮಾತ್ಮನಾದ ರಾಮನು ಶುದ್ಧ ಸ್ವರೂಪ ಹಂಸದೊಡನೆ ಸಂದೇಶ ಕಳುಹಿಸುವುದೂ, ಅವನ ಆರ್ತತ್ರಾಣ ಪರಾಯಣತೆಯನ್ನು ಸೂಚಿಸುವ ಕಾತುರತೆಯಾಗಿದೆ. ಮೇಘಸಂದೇಶದಲ್ಲಿ ಮೇಘದೂತವು ಕಥಾನಾಯಕಿಯನ್ನು ಯಾವರೀತಿಯಲ್ಲೂ ಹೋಲುವುದಿಲ್ಲ. ಹಂಸಸಂದೇಶದಲ್ಲಾದರೋ ದೂತ ಹಂಸವು ಕಥಾನಾಯಕಿಯನ್ನೇ ಬಹಳಮಟ್ಟಿಗೆ ಗುಣಗಳಲ್ಲಿ ಹೋಲುವುದರಿಂದ ಕಥಾನಾಯಕನ ಹೃದಯದಲ್ಲಿ ಪ್ರಿಯೆಯ ವಿರಹವನ್ನು ತಟ್ಟನೆ ಜ್ಞಾಪಿಸಿ ಅವನು ವ್ಯಮರೆಯುವಂತೆ ಮಾಡುತ್ತದೆ. ಮೇಘಸಂದೇಶದಲ್ಲಿ ವಿರಹದುಃಖದಿಂದ ಕೂಡಿದ ಯಕ್ಷನು, ಅಚೇತನವಾದ ಮೇಘವು ತನ್ನ ಸಂದೇಶವನ್ನು ಒಯ್ಯಬಲ್ಲುದೇ ಇಲ್ಲವೇ ಎಂಬುದನ್ನು ಕೂಡ ವಿಚಾರಮಾಡಲಾರದಷ್ಟು ವಿವೇಕಶೂನ್ಯನಾಗಿ ಕಥಾಪ್ರಾರಂಭದಲ್ಲೆ ಮೇಘವನ್ನು ಶರಣುಹೋಗುತ್ತಾನೆ. ಹಂಸಸಂದೇಶದಲ್ಲಾದರೋ ಗೀತೋಕ್ತಪ್ರಕಾರವಾಗಿ ಗ್ರಂಥಾಂತ್ಯದಲ್ಲಿ "ಆರ್ತತ್ರಾಣ" ಎಂದು ಹೇಳಿ ಈ ರೀತಿಯಲ್ಲಿ ದೂತವಾಕ್ಯವನ್ನು ಕೊಂಡೊಯ್ದು ಸೀತೆಗೆ ತಲಪಿಸುವುದು ಹಂಸದ ಕರ್ತವ್ಯವೆಂದು ಹೇಳಿ ಅದಕ್ಕೆ ಆ ಕೆಲಸವನ್ನು ನಿರೂಪಿಸುತ್ತಾನೆ. ಮೇಘಸಂದೇಶದಲ್ಲಿ ಕವಿಯು ಯಕ್ಷಪತ್ನಿಯನ್ನು, ಎಂಥವರಾದರೂ ವಿಧಿಯ ವಿಚಿತ್ರವರ್ತನೆಯನ್ನು ಸಹಿಸಲೇಬೇಕೆಂದು ಹೇಳಿ ಸಮಾಧಾನಪಡಿಸುತ್ತಾನೆ. ಹಂಸಸಂದೇಶದಲ್ಲಾದರೋ ಕವಿಯು ಇನ್ನೂ ಅನೇಕ ಮಹಾಮಹಿಳೆಯರು ಹೇಗೆ ಕಷ್ಟವನ್ನು ಅನುಭವಿಸಿ ಕೊನೆಗೆ ಅದರಿಂದಲೇ ಉತ್ತರೋತ್ತರವು ಸೌಖ್ಯವನ್ನು ಆ ಮೇಲೆ ಪಡೆದರೆಂಬುದನ್ನು ತಿಳಿಸಿ ತನ್ಮೂಲಕ ಸೀತೆಯು ತನ್ನ ತಾತ್ಕಾಲಿಕವಾದದುಃಖವನ್ನು ಸಹಿಸಬೇಕೆಂದು

ಸಮಾಧಾನಪಡಿಸುತ್ತಾನೆ. ಮೇಘಸಂದೇಶದಲ್ಲಿ ಹಂಸಗಳು ದೂತ ಮೇಘದ ಸಹಚರಗಳು. ಹಂಸಸಂದೇಶದಲ್ಲಾದರೋ ಶರದೃತುವಿನ ಬಿಳಿಯಮೇಘಗಳು ದೂತ ಹಂಸಕ್ಕೆ ಕೊಡೆಹಿಡಿಯುತ್ತವೆ. ಹಂಸ ಸಂದೇಶದ ಕವಿಯು ವಿಷ್ಣುಭಕ್ತನಾದರೂ ಮಹಾಕವಿ ಸಹಜ ವಾದ ಪರಮತ, ಪರದೈವ ಸಹಿಷ್ಣುತೆಯುಳ್ಳವರಾಗಿ ಪಾರ್ವತೀ ಪರಮೇಶ್ವರರ ವರ್ಣನೆಗಳನ್ನು ಬಹಳ ಉತ್ತಮರೀತಿಯಲ್ಲಿ ಮಾಡಿರು ವುದು ಹೆಚ್ಚು ಶ್ಲಾಘ್ಯವಾಗಿದೆ ಮೇಘಸಂದೇಶದಲ್ಲಿ ಕವಿಯು ಸ್ವದೇಶಾಭಿಮಾನದಿಂದ ಕೂಡಿದವನಾಗಿ ಉಜ್ಜಯಿನೀ ಪ್ರಾಂತವು ಮೇಘದದಾರಿಯಲ್ಲಿಲ್ಲದಿದ್ದರೂ, ಸ್ವಲ್ಪ ತಿರುಗಿ ಆ ದೇಶದಮೇಲೆ ಹಾದುಹೋಗಬೇಕೆಂದು ಮೇಘವನ್ನು ಕೇಳಿಕೊಂಡಿದಾನೆ ಮತ್ತು 12 ಶ್ಲೋಕಗಳಿಂದ ಮಾಳವದೇಶದ ವರ್ಣನೆಯನ್ನು ಬಹಳ ಹೃದಯಂಗ ಮವಾಗಿಮಾಡಿ ತನ್ನ ಸ್ವದೇಶಾಭಿಮಾನವನ್ನು ವ್ಯಕ್ತಪಡಿಸುತ್ತಾನೆ.

ಹಂಸಸಂದೇಶದಲ್ಲಾದರೋ ಕವಿಯ ಸ್ವದೇಶವಾದ ಕಾಂಚೀ ಪ್ರಾಂತವು ಹಂಸದ ಮಾರ್ಗದಲ್ಲೇ ಇದೆ. ಕಾಂಚೀಪಟ್ಟಣದ ವರ್ಣ ನೆಯನ್ನು ೧೧ ಶ್ಲೋಕಗಳಲ್ಲಿ ಬಹಳ ಅಂದವಾಗಿ ವರ್ಣಿಸಿ ತಮ್ಮ ಸ್ವದೇಶ ಪ್ರೇಮವನ್ನು ಕವಿಯು ವ್ಯಕ್ತಪಡಿಸಿರುತ್ತಾರೆ. ಮೇಘ ಸಂದೇಶದಲ್ಲಿ ಮೇಘದ ಮಾರ್ಗದಲ್ಲಿ ಬರುವ ಬೇರೆಬೇರೆ ದೇಶಗಳ ವರ್ಣನೆಗಳಲ್ಲಿ ಸುಂದರಸ್ತ್ರೀಯರ ವರ್ಣನೆಗಳೇ ಹೆಚ್ಚಾಗಿದೆ. ಹಂಸಸಂದೇಶದಲ್ಲಾದರೋ ಹಂಸದ ದಾರಿಯುದ್ದಕ್ಕೂ ಸಿಕ್ಕುವ ಸ್ಥಳಗಳೆಲ್ಲವೂ ಪವಿತ್ರಸ್ಥಳಗಳೇ ಮತ್ತು ಅವುಗಳ ರಮಣೀಯವಾದ ವರ್ಣನೆಗಳೆಲ್ಲವೂ ಪಾಠಕರ ಹೃದಯದಲ್ಲಿ ಭಕ್ತಿಯನ್ನು ಹುಟ್ಟಿಸು ವಂಥವುಗಳೇ ಆಗಿವೆ. ಹಂಸದ ದಾರಿಯಲ್ಲಿ ಶ್ರೀರಂಗಕ್ಷೇತ್ರವು ಸಿಕ್ಕು ತ್ತದೆ. ಇದು ವಿಶಿಷ್ಟಾದ್ವೈತಿಗಳಿಗೆ ಅತ್ಯಂತ ಪವಿತ್ರಸ್ಥಳ. ಈ ಕ್ಷೇತ್ರದ ವರ್ಣನೆಯು ಅತ್ಯಂತ ಅವಶ್ಯಕವೂ ಆಗಿದೆ. ಆದರೆ ಪುರಾಣೋಕ್ತ

ರೀತ್ಯಾ ಶ್ರೀರಂಗದಲ್ಲಿ ಪ್ರತಿಷ್ಠಿತನಾಗುವ ರಂಗನಾಥಸ್ವಾಮಿಯು, ರಾಮಪಟ್ಟಾಭಿಷೇಕಾನಂತರ ವಿಭೀಷಣನು ಲಂಕೆಗೆ ಹಿಂದಿರುಗುವಾಗ ಪ್ರತಿಷ್ಠಿಸಿದ ಮೂರ್ತಿಯಾಗಿದೆ. ಆದುದರಿಂದ ಶ್ರೀರಂಗನಾಥನ ವರ್ಣನೆಯು ಸಾಧ್ಯವಿಲ್ಲ. ಆದುದರಿಂದಲೇ ಕವಿಯು ತನ್ನ ಚಾತುರ್ಯ ವನ್ನು ತೋರಿಸಿ, ಮುಂದೆ ರಂಗನಾಥನು ಪ್ರತಿಷ್ಠಿತನಾಗುವ ಪವಿತ್ರ ಶೇಷಪೀಠವನ್ನೇ ವರ್ಣಿಸಿ, ಅದರ ಉಲ್ಲೇಖನದಿಂದಲೆ ಶ್ರೀರಂಗ ವರ್ಣನೆಯನ್ನು ಮುಗಿಸುತ್ತಾನೆ. ಮೇಘಸಂದೇಶದಲ್ಲಿ "ಮಧ್ಯೇ ಕ್ಷಾಮಾ" "ಅವಿಧವಾ" ಮೊದಲಾದ ಅಷ್ಟು ಸೂಕ್ತವಲ್ಲದ ಪದ ಪ್ರಯೋಗಗಳಿವೆ. ಅಂಥದೇ ಸನ್ನಿವೇಶಗಳಲ್ಲಿ ಹಂಸಸಂದೇಶ ಕವಿಯು ಮೊದಲನೇ ಪದಕ್ಕೆ ಬದಲಾಗಿ "ವೇದಿಮಧ್ಯಾ" ಎಂಬ ಪದ ಪ್ರಯೋಗಮಾಡಿಯೂ, ಎರಡನೇ ಪದವನ್ನು ಕಥಾನಾಯಕಿಗೆ ಸಂಬೋಧಿಸುವುದಕ್ಕೆ ಬದಲಾಗಿ ಕಥಾನಾಯಕನನ್ನೇ "ದೀರ್ಘಾ ಯುಃ" ಎಂಬ ವಿಶೇಷಣದಿಂದ ಸೂಚಿಸಿ ತನ್ಮೂಲಕ ಕಥಾನಾಯ ಕಿಯ ಸೌಮಂಗಲ್ಯಸೌಭಾಗ್ಯವನ್ನು ಸೂಚಿಸುತ್ತಾನೆ.

ಹೀಗೆ ಎರಡು ಗ್ರಂಥಗಳನ್ನು ಹೋಲಿಸಿ ಓದಿನೋಡಿದಲ್ಲಿ ಹಂಸ ಸಂದೇಶವು ಅತ್ಯುತ್ತಮವೂ ಬಹಳ ಮನೋಹರವೂ ಆಗಿರುವ ಗ್ರಂಥ ವೆಂಬುದಕ್ಕೆ ಏನೇನೂ ಸಂಶಯವಿಲ್ಲವೆಂಬುದು ಸ್ಪಷ್ಟಪಡುತ್ತದೆ.

ಶ್ರೀ ವೇದಾನ್ತಾಚಾರ್ಯರು ಸಂಸ್ಕೃತ ದ್ರಾವಿಡಮಿಶ್ರವಾದ ಮಣಿಪ್ರವಾಳದ ತತ್ವಗ್ರನ್ಥಗಳಲ್ಲದೆ ಕೇವಲ ದ್ರಾವಿಡಭಾಷಾಮಯ ವಾದ ಅಮೃತರಂಜನೀ ಮೊದಲಾದ 19 ಗ್ರಂಥಗಳಲ್ಲಿ 405 ಪದ್ಯ ಗಳನ್ನು ರಚಿಸಿರುತ್ತಾರೆ:—

ಅಮೃತರಂಜನೀ 39 ಪದ್ಯ, ಅಮೃತಾಸ್ವಾದಿನೀ 37 ಪದ್ಯ, ಅಧಿಕಾರ ಸಂಗ್ರಹ 56 ಪದ್ಯ, ಪರಮತಭಙ್ಗ 54 ಪದ್ಯ, ಅರ್ಥಪಂಚಕಂ 11 ಪದ್ಯ, ಗೀತಾರ್ಥಸಂಗ್ರಹವ್ಯಾಖ್ಯಾ 21 ಪದ್ಯ, ನವರತ್ನಮಾಲೈ 10 ಪದ್ಯ, ಪ್ರಬನ್ಧಸಾರಂ 18 ಪದ್ಯ, ಒಟ್ಟು 19 ಗ್ರಂಥಗಳಿಗೆ 405 ಪದ್ಯಗಳು.

"ಇಪ್ಪತ್ತನೆಯ ಶತಮಾನದ ಅಮೋಘ ಕೌತುಕವೆಂದರೆ ವಿಜ್ಞಾನಶಾಸ್ತ್ರದಲ್ಲಿ "Radio" "ರೇಡಿಯೋ" ಜನನ. "ಆಕಾಶವಾಣಿ" ಯೆಂದು ನಾವು ಇದುವರೆಗೂ ಪುರಾಣಗಳಲ್ಲೂ, ಕಟ್ಟುಕಥೆಗಳಲ್ಲೂ ಓದಿದ್ದೆವು. ಆದರೆ ಅದನ್ನು ಈಗ ನಾವು ಸ್ವತಃ ಉಪಯೋಗಿಸುತ್ತಿದ್ದೇವೆ—ಅನುಭವಿಸುತ್ತಿದ್ದೇವೆ. ಇದು "Electromagnetic" "ಎಲೆಕ್ಟ್ರೊಮ್ಯಾಗ್ನೆಟಿಕ್" ವಾಯು ತರಂಗಗಳ ಮೂಲಕ, ಸಂಕೇತ ಶಬ್ದಗಳಿಂದ ಸಮಾಚಾರಗಳನ್ನು ಪ್ರಸಾರಮಾಡುವ ಒಂದು ಉಪಕರಣ. ಮೋಡಗಳೂ, ಮಂಜೂ ಮತ್ತು ಬಿರುಗಾಳಿಯಿರುವ ಸಂದರ್ಭಗಳಲ್ಲಿ ಈ ವಾಯುತರಂಗಗಳು ಕ್ರಮವಾಗಿ, ಲಲಿತವಾಗಿ, ತಡೆಯಿಲ್ಲದೆ ಸ್ಪಷ್ಟವಾಗಿ ಪ್ರಸಾರವಾಗುವುದಿಲ್ಲ. ಅಲ್ಲದೆ ವಾಯು ತರಂಗಗಳು ಕದಲಿ ಒಂದರಮೇಲೊಂದು ಬಿದ್ದು ಅಸ್ಪಷ್ಟವಾಗುತ್ತವೆ. ಆದ್ದರಿಂದ ಸ್ಪಷ್ಟಶಬ್ದಪ್ರಸಾರಕ್ಕೆ ನಿರ್ಮಲಾಕಾಶವು ಅವಶ್ಯಕ. ಪ್ರಯುಕ್ತ ಹಂಸಸಂದೇಶದಲ್ಲಿ ಶರತ್ಕಾಲದಲ್ಲಿ ಹಂಸವನ್ನೇ ದೂತನನ್ನಾಗಿ ಮಾಡಿರುವುದರ ಗಣ್ಯತೆ ಇಷ್ಟೇ—

ಶುಭ್ರವಾದ ಹಂಸವು ಶರತ್ಕಾಲದ ನಿರ್ಮಲಾಕಾಶಕ್ಕೆ ಹೆಚ್ಚು ಸಂಯಮ ಕೊಡುತ್ತದೆ. ಮಹಾಕವಿ ಕಾಳಿದಾಸನ ಮೇಘಸಂದೇಶದಲ್ಲಿ ವರ್ಷಾಕಾಲದ (ವರ್ಷಋತುವಿನ)ಲ್ಲಿ ಮೇಘವು ಸಂದೇಶ ಪ್ರಸಾರಮಾಡುತ್ತದೆ.

ಆದರೆ, 'ಹಂಸಸಂದೇಶದ' ಹಂಸವಾಗಲೀ ಅಥವಾ 'ಮೇಘ ಸಂದೇಶದ' ಮೇಘವಾಗಲೀ ನಿಜವಾಗಿ ಸಮಾಚಾರಗಳನ್ನು ತೆಗೆದು ಕೊಂಡು ಹೋಗುವುದಿಲ್ಲ. ಮಹಾಕವಿ ಕಾಳಿದಾಸನು ಬರೆದಿರುವ ಕಾವ್ಯದಮೇಲೆ ಇದು ಟೀಕೆಯಲ್ಲ. "ಹಂಸಸಂದೇಶ" ದಲ್ಲಿನ ಉದ್ದೇಶವಿಷ್ಟೇ—ಮೋಡಕವಿದಿರುವ ವರ್ಷಾಕಾಲದ ಆಕಾಶದಲ್ಲಿ ಚಲಿಸುವ ಮೋಡಕ್ಕಿಂತಲೂ, ಶರತ್ಕಾಲದ ನಿರ್ಮಲಾಕಾಶಕ್ಕೆ

ಹೊಂದಿಕೆಯಾದ ಮತ್ತೂ ಹರ್ಷದಿಂದ ಒಪ್ಪುವ ಹಂಸವು ಔಚಿತ್ಯ ವೆಂಬುದೇ ಭಾವನೆ.'' D. S. S. Gowda, B.SC.

ಶ್ರೀ ವೆಂಕಟನಾಥರ ಕಾಲ ಕ್ರಿ. ಶ. 1269-1370. ಇವರು ಸುಮಾರು ನೂರೊಂದುವರ್ಷ ಈ ಲೋಕದಲ್ಲಿದ್ದರು. ಇವರಿಗೆ ಸುಪ್ರಸಿದ್ಧರಾದ ಎಂಟುಜನ ಮಹಾಪಂಡಿತರು ಶಿಷ್ಯರಾಗಿದ್ದರು. ಅವರಲ್ಲಿ ಇವರ ಮಕ್ಕಳು ಶ್ರೀ ವರದಾಚಾರ್ಯರು ಮತ್ತು ಶ್ರೀ ಬ್ರಹ್ಮತಂತ್ರಸ್ವತಂತ್ರಸ್ವಾಮಿಗಳೂ ಬಹುಮುಖ್ಯರು. ಈಗ ಮೈಸೂರಿನಲ್ಲಿ ನೆಲೆಗೊಂಡಿರುವ ಶ್ರೀ ಪರಕಾಲಮಠಕ್ಕೆ ಆ ಬ್ರಹ್ಮತಂತ್ರಸ್ವತಂತ್ರಸ್ವಾಮಿಗಳೇ ಮೂಲಪುರುಷರು. ಈ ಪರಂಪರೆಯಲ್ಲಿ ಎಲ್ಲರೂ ಮಹಾಪಂಡಿತರೂ ಮಹಾಭಕ್ತರೂ ಆಗಿದ್ದರು. ಅಂತಹವರಲ್ಲಿ ಶ್ರೀ ಶ್ರೀಕೃಷ್ಣ ಬ್ರಹ್ಮತಂತ್ರಸ್ವಾಮಿಗಳು ಮುಖ್ಯರು.

ಹಂಸಸಂದೇಶ ಮಹಾಕಾವ್ಯಕ್ಕೆ ಎರಡು ವ್ಯಾಖ್ಯಾನಗಳುಂಟು. ಇದರಲ್ಲಿ ಒಂದನೆಯದು ಲಘುವ್ಯಾಖ್ಯಾ. ಎರಡನೆಯದು ಶ್ರೀ ಶ್ರೀಕೃಷ್ಣ ಬ್ರಹ್ಮತಂತ್ರಸ್ವಾಮಿಗಳಿಂದ ರಚಿತವಾದ 'ರಸಾಸ್ವಾದಿನೀ' ಎಂಬ ವ್ಯಾಖ್ಯಾನವು. ಇದು ಉತ್ತಮೋತ್ತಮವಾದುದು. ಇದಕ್ಕೆ ಆಸ್ಥಾನ ಮಹಾವಿದ್ವಾನ್ ತರ್ಕತೀರ್ಥಂ ಪಂಡಿತರತ್ನಂ ಶ್ರೀ ಕಸ್ತೂರಿ ರಂಗಾಚಾರ್ಯರು ರಚಿಸಿರುವ ಟಿಪ್ಪಣಿಯೂ ಸೇರಿದೆ. ಇವುಗಳಿಂದ ಆ ಗ್ರಂಥ ಓದತಕ್ಕವರಿಗೆ ಆಗುವ ಉಪಕಾರವು ಅತ್ಯುತ್ತಮವಾದುದು.

ನಮ್ಮ ಪ್ರಭುಗಳಾದ ನಾಲ್ವಡಿ ಶ್ರೀ ಕೃಷ್ಣರಾಜಒಡೆಯರ್ ಬಹದ್ದೂರ್, ಜಿ.ಸಿ.ಎಸ್.ಐ., ಜಿ.ಬಿ.ಇ., ಮುಂತಾದ ಬಿರುದಾಂಕಿತರು, ಗುಜರಾತ್ ದೇಶದಿಂದ ದಕ್ಷಿಣದೇಶಕ್ಕೆ ರಾಜ್ಯಾರ್ಥವಾಗಿ ಬಂದ ಶ್ರೀ ಯದುರಾಯಕೃಷ್ಣರಾಯರ ವಂಶಸ್ಥರು. ಅವರು ''ಶ್ರೀ ಕೃಷ್ಣನ ವಂಶದವರು'' ಎಂದು ಶಾಸನಗಳಿಂದ ಪ್ರಖ್ಯಾತವಾಗಿದೆ. ಇವರು ಮೈಸೂರಿಗೆ ಆಗಮಿಸಿದ ಕಾಲ ಕ್ರಿ. ಶ. 1399. ಅಂದಿ

ನಿಂದಲೂ ಈ ಕರ್ಣಾಟಕದೇಶಕ್ಕೆ ಬಹುತರವಾಗಿ ಒಂದಲ್ಲ ಒಂದು ರೀತಿಯಿಂದ ಈ ವಂಶಸ್ಥರೇ ಪ್ರಭುಗಳಾಗಿರುವರು. ಈ ಪ್ರಭುಗಳೂ ಇವರ ಪೂರ್ವಿಕರೂ ಮೇಲಿಕಂಡ ಶ್ರೀ ಬ್ರಹ್ಮತಂತ್ರ ಪರಕಾಲಮಠಕ್ಕೆ ಅಗ್ರಗಣ್ಯರಾದ ಶಿಷ್ಯರಾಗಿರುತ್ತಾರೆ.

ನಮ್ಮ ಪೂರ್ವಿಕರು ಮೊದಲು ಬಹಳ ಹಿಂದಿನಕಾಲದಲ್ಲಿ ಕುಂಭಕೋಣ, ಶ್ರೀಮುಷ್ಣ, ತಿರುಪತಿ, ಶ್ರೀರಂಗ, ಕಾಂಚೀ ಮೊದಲಾದ ಕ್ಷೇತ್ರಗಳಲ್ಲಿ ನೆಲೆಗೊಂಡಿದ್ದರು. ಶ್ರೀ ರಾಮಾನುಜಾಚಾರ್ಯರ ಕಾಲದಲ್ಲಿ ತಮ್ಮ ಪಾಂಡಿತ್ಯಭಗವದ್ಭಾಗವತಭಕ್ತಿಗಳಿಂದ ಅವರ ಮನಸ್ಸಂತೋಷಪಡಿಸಿ ವಿದ್ವಚ್ಚಕ್ರವರ್ತಿಯೆಂಬ ಬಿರುದನ್ನು ಸಂಪಾದಿಸಿದರು. ಅಲ್ಲದೆ ಗಣ್ಯರಾದ ಎಪ್ಪತ್ತುನಾಲ್ಕು ಶಿಷ್ಯರಲ್ಲಿ ಮುಖ್ಯರೂ ಆಗಿದ್ದರು. ಇವರ ವಂಶದವರು, ಮುಂದೆ ವೇದಾಂತಾಚಾರ್ಯರೆಂಬ ಪ್ರಖ್ಯಾತನಾಮಧೇಯರಾದ ಕವಿತಾರ್ಕಿಕಸಿಂಹ ವೆಂಕಟನಾಥರಲ್ಲೂ ಗಣ್ಯರಾದ ಶಿಷ್ಯರಾಗಿದ್ದರು. ಇವರ ವಂಶದವರಾದ ನಮ್ಮ ಪೂರ್ವಿಕರು, ನವಕೋಟಿನಾರಾಯಣ ಅಪ್ರತಿಮವೀರ ರಾಜನೀತಿವಿಶಾರದ ಶ್ರೀಮಚ್ಚಿಕ್ಕದೇವರಾಜ ಒಡೆಯರವರ ಕಾಲದಲ್ಲಿ ಮೈಸೂರು ದೇಶಕ್ಕೆ ಕರೆಯಿಸಲ್ಪಟ್ಟರು. ಅದರಂತೆಯೇ ನಮ್ಮ ಪೂರ್ವಿಕರು ಬೆಟ್ಟದ ಕೋಟೆಗೆಬಂದು ನೆಲೆಸಿದರು. ಆಗಿನಕಾಲದ ಪ್ರಭುಗಳು ಪಾಳೆಯಗಾರರು ಅನೇಕ ಕ್ಷತ್ರಿಯಶ್ರೇಷ್ಠರು ತೋರಿಸಿದ ಗೌರವದಿಂದ ಅಭಿವೃದ್ಧಿಗೊಂಡರು. ಅಂದಿನಿಂದ ಬೆಟ್ಟದ ಕೋಟೆಯ ಗುರುಗಳು ಎಂಬ ಬಿರುದು ಸಲ್ಲುತ್ತಾಬಂದಿದೆ. ಕ್ರಮೇಣ ನಮ್ಮ ಪೂರ್ವಿಕರು ಹೆಡತಲೆಗೂ ಹುಲ್ಲಹಳ್ಳಿಗೂ ಬಂದು ನೆಲೆಸಿದರು. ಶ್ರೀಮಾನ್ ಶ್ರೀ ಮುಮ್ಮಡಿಕೃಷ್ಣರಾಜ ಒಡೆಯರವರ ಕಾಲದಲ್ಲಿ ಮೈಸೂರಿಗೆ ಬಂದು ನೆಲೆಸುವ ಸಂದರ್ಭವೊದಗಿತು. ನಮ್ಮ ಪೂರ್ವಿಕರಿಗೆ ಈ ಆಸ್ಥಾನದಲ್ಲಿ ವಿದ್ವತ್ಪದವಿಯು ಯೋಗ್ಯತೆಯಿಂದ ಲಭಿಸಿತ್ತು.

ನಮ್ಮ ತಂದೆ ಶ್ರೀಮಾನ್ ಪಂಡಿತ ಹೆಚ್. ರಂಗನಾಥಚಕ್ರವರ್ತಿಗಳು ಕನ್ನಡ ಸಂಸ್ಕೃತ ತಮಿಳುಭಾಷೆಗಳಲ್ಲಿ ಒಳ್ಳೆಯಪಾಂಡಿತ್ಯ ಸಂಪಾದಿಸಿ ಸಂಸ್ಥಾನದ ಹೈಸ್ಕೂಲುಗಳಲ್ಲಿ ಪಂಡಿತರಾಗಿದ್ದರು.

ನಾನೂ ಅವರಂತೆ ಪಂಡಿತನಾಗುವುದಕ್ಕೆ ದಿವಂಗತ ಶ್ರೀಮಾನ್ ಶ್ರೀಪುಟ್ಟಯ್ಯಾಜಿ ಅರಸಿನವರ ಪ್ರೋತ್ಸಾಹವೇ ಕಾರಣವು. ನನ್ನ ಯೋಗ್ಯತೆಯನ್ನು ನೋಡಿ ದಿವಂಗತ ಶ್ರೀ ಸರದಾರ್ ಎಂ. ಗೋಪಾಲ ಕೃಷ್ಣೇ ಅರಸಿನವರು ದಿ|| ಶ್ರೀ|| ಎಂ. ಗೋಪಾಲರಾಜೇ ಅರಸಿನವರು ಬಹಳ ಸಂತೋಷಗೊಂಡಿದ್ದರು. ಅಂತಹವರುಗಳು ಬಹುಬೇಗ ಪರಲೋಕಗತರಾದುದು ನಮ್ಮ ದೌರ್ಭಾಗ್ಯಕ್ಕೆ ಮುಖ್ಯಕಾರಣವು.

ಶ್ರೀಮಾನ್ ರಾಜಮಾನ್ಯ ರಾಜಶ್ರೀ ಎಂ. ಪಿ. ಸುಬ್ರಮಣ್ಯ ರಾಜೇಅರಸಿನವರ ಪ್ರೋತ್ಸಾಹವೇ ನನ್ನ ಗ್ರಂಥಲೇಖನಕ್ಕೆ ಮುಖ್ಯವಾದ ಸಹಾಯವು, ಉತ್ತೇಜಕವು. ಇಂತಹವರ ಪ್ರೋತ್ಸಾಹವೇ ನಮ್ಮನ್ನು ಮುಂವಕ್ಕೆ ಹೋಗಲು ದಾರಿತೋರಿಸುವುದು.

ನಾಲ್ವಡಿ ಶ್ರೀಕೃಷ್ಣರಾಜ ಒಡೆಯರ್ ಬಹದ್ದೂರ್ ಜಿ.ಸಿ. ಎಸ್.ಐ., ಜಿ.ಬಿ.ಇ., ರವರ 'ರಜತಮಹೋತ್ಸವವ್ಯಾವರ್ಣನಕಾವ್ಯ' ಕರ್ತೃಗಳೂ, ಕನ್ನಡ ಸಂಸ್ಕೃತಗಳಲ್ಲಿ ಉತ್ತಮವಾದ ಪರಿಶ್ರಮವುಳ್ಳವರೂ ಕವಿಗಳೂ, ಆದ ನಮ್ಮ ಮಾವನವರು ಶ್ರೀ ವಾಜಪೇಯಂ ವೆಂಕಟವರದಾಚಾರ್ಯರವರು ಈ ಗ್ರಂಥವನ್ನು ಮೊದಲಿಂದ ಕಡೆಯವರೆಗೂ ಸಮಾಧಾನಚಿತ್ತದಿಂದ ಪರಿಶೀಲಿಸಿ, ಇದ್ದ ಅನೇಕ ಸ್ಖಾಲಿತ್ಯಗಳನ್ನು ತಿದ್ದಿಕೊಳ್ಳಲು ಸಹಾಯಮಾಡಿರುತ್ತಾರೆ. ಈ ವುಪಕಾರವು ಬಹಳಮಟ್ಟಿಗೆ ಸ್ಮರಿಸತಕ್ಕದ್ದು ಆಗಿದೆ. ಇವರಂತೆಯೇ ಮೇಘ ಸಂದೇಶವನ್ನೂ ಕನ್ನಡಿಸಿರುತ್ತೇನೆ.

ಈ ಹಂಸಸಂದೇಶವನ್ನು ಕನ್ನಡ ಸರಳಗದ್ಯಾನುವಾದ ಮಾಡಲು ಕೆಲವು ಕಾರಣಗಳುಂಟು.

(೧) ಕ್ಷತ್ರಿಯಕುಲಮಣಿ ಸೀತಾರಾಮನಾಗಿ ಅವತರಿಸಿದ ಭಗವಂತನಲ್ಲಿರುವ ಅಪಾರವಾದ ಭಕ್ತಿ.

(೨) ಕರ್ಣಾಟಕಪ್ರಭುಗಳೂ, ರಾಜರ್ಷಿಗಳೂ, ಕೋಟೀಶ್ವರರೂ ಆದ ಶ್ರೀಮನ್ಮಹಾರಾಜರವರ ಮಾತೃಭಾಷೆಯಲ್ಲಿ (ಕನ್ನಡದಲ್ಲಿ) ಗ್ರಂಥಬರೆಯಬೇಕೆಂಬ ಪ್ರೇಮ.

(೩) ಕನ್ನಡದೇಶದ ಜನತೆಯ ಸೇವೆಮಾಡಬೇಕೆಂಬ ಆಸೆ.

(೪) ಪಾರ್ಥಸಾರಥಿಯಾಗಿಯೂ ಗೀತಾಚಾರ್ಯನಾಗಿಯೂ ರುಕ್ಮಿಣೀಸತ್ಯಭಾಮಾಪತಿಯಾಗಿಯೂ ಇರುವ ಶ್ರೀಕೃಷ್ಣನ ದಯೆಯಿಂದ ಶ್ರೇಯಸ್ಸು ದೊರೆಯುವುದೆಂಬ ನಂಬಿಕೆ.

ನಮ್ಮ ಮಹಾಪ್ರಭುಗಳು ರಾಜನೀತಿಯಲ್ಲಿ ಪ್ರವೀಣರಾಗಿರುವುದಲ್ಲದೆ ಸಂಗೀತಸಾಹಿತ್ಯಗಳಲ್ಲೂ ನಿಪುಣರಾಗಿರುತ್ತಾರೆ. ಭರತಖಂಡದ ಪ್ರಭುಗಳಲ್ಲಿ ಇವರಿಗೆ ಸಮರು ಮತ್ತಾರೂ ಇಲ್ಲ. ಇಂತಹವರ ಘನ ಚಿತ್ತವು ಈ ಅಲ್ಪಸೇವೆಯಿಂದ ಸಂತೋಷಗೊಂಡರೆ ನನ್ನ ಶ್ರಮವು ಸಾರ್ಥಕವೆಂದು ಭಾವಿಸುತ್ತೇನೆ.

“ನಾವಿಷ್ಣುಃ ಪೃಥಿವೀಪತಿಃ” ಎಂದು ಶಾಸ್ತ್ರವಾಕ್ಯವು. ಮಹಾವಿಷ್ಣುವಿನ ಅಂಶವಿಲ್ಲದೆ ಭೂಪತಿಯಾಗುವುದಿಲ್ಲವೆಂಬುದು ಇದರ ಪರಮಾರ್ಥ.

ಗೀತಾಚಾರ್ಯನು ತಾನು ರಾಮನೆಂದು ಹೇಳಿದ್ದಾನೆ. ಎಂದರೆ ರಾಮಕೃಷ್ಣರಿಗೆ ಭೇದವೇ ಇಲ್ಲ. ಈ ಕಾವ್ಯವು ಸೀತಾರಾಮರಿಗೆ ಸಂಬಂಧಿಸಿದುದು. ಎಂದರೆ ಕೃಷ್ಣನ ವಿಚಾರವೇ ಆಗಿದೆ. ಶ್ರೀಮನ್ಮಹಾರಾಜರವರೂ ಶ್ರೀಕೃಷ್ಣನವಂಶೀಯರು. ಅದು ಕಾರಣದಿಂದ ಶ್ರೀಕೃಷ್ಣನಿಗೂ, ಶ್ರಿಕೃಷ್ಣಭೂಪತಿಗೂ ಅಭೇದವೇಸರಿ. ರಾಜಭಕ್ತಿಯ ಮೂಲಕ ದೈವಭಕ್ತಿಪಡೆಯುವುದು ಸುಲಭ. ಏತಕ್ಕೆಂದರೆ:—

"ರಾಜಾ ಪ್ರತ್ಯಕ್ಷದೈವತಂ" ಎಂದು ಶಾಸ್ತ್ರ. ಶ್ರೀಕೃಷ್ಣಭೂಪತಿಯ ಸೇವೆಯೇ ಶ್ರೀಕೃಷ್ಣನಸೇವೆ. ಶ್ರೀಕೃಷ್ಣಭೂಪತಿಯ ಸಂತೋಷವೇ ಶ್ರೀಕೃಷ್ಣಭಗವಂತನ ಒಲ್ಮೆಗೆ ಮುಖ್ಯವಾದ ಮಾರ್ಗ.

ಈ ಗದ್ಯಾನುವಾದವು ಗುಣಪರಿಪೂರ್ಣವೆಂದು ನಾನು ನಂಬಿಲ್ಲ. ದೋಷಗಳು ನನ್ನ ಬುದ್ಧಿಮಾಂದ್ಯದಿಂದ ಬಿದ್ದಿರಬಹುದು. ಗುಣಜ್ಞರು ನನಗೆ ಅವುಗಳನ್ನು ತೋರಿಸಿಕೊಟ್ಟು ತಿದ್ದಿಕೊಳ್ಳಲು ಸಹಾಯಮಾಡಬೇಕೆಂದು ಪ್ರಾರ್ಥನೆಗಳು.

ಗುಣದೋಷೌ ಬುಧೋ ಗೃಹ್ಣನ್ ಇಂದುಕ್ಷ್ವೇಡಾವಿವೇಶ್ವರಃ ।
ಶಿರಸಾ ಶ್ಲಾಘತೇ ಪೂರ್ವಂ ಪರಂ ಕಂಠೇ ನಿಯಚ್ಛತಿ ॥ (ಮಹಾಕವಿಸೂಕ್ತಿ.)

ಅವಧರಿಪುದು ವಿಬುಧರ್ದೋ
ಷವಿದರೊಳೇನಾನುಮುಳ್ಳೊಡಂ ಪ್ರಿಯದಿಂತಿ ।
ರ್ದುವುದುಗುಣಯುಕ್ತಮುಂದೋ
ಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ ॥ (ಕೇಶಿರಾಜಕವಿ.)

ಇತಿರಾಜಭಕ್ತ, ಸಜ್ಜನವಿಧೇಯ,
**ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯ,**
ಗವರ್ನಮೆಂಟ್ ಮರಿಮಲ್ಲಪ್ಪಾ ಹೈಸ್ಕೂಲ್,
ಮೈಸೂರು.

ಮೈಸೂರು,
ತಾ॥ 15—5—38



ಶ್ರೀಮತ್ ಯುವರಾಜ

ಶ್ರೀ ಕಂಠೀರವ ನರಸಿಂಹರಾಜ ಒಡೆಯರ್ ಬಹದ್ದೂರ್,

ಜಿ. ಸಿ. ಐ. ಇ , ರವರು.

# ಮಾರ್ಗದರ್ಶಕ.

---

ಮಹಾಕಾವ್ಯಗಳಲ್ಲಿ ಎಲ್ಲವೂ ಸಾರವಾದುವುಗಳೇ, ಅವಕ್ಕೆ ಯಾವ ಆಕ್ಷೇಪಣೆಯೂ ಇಲ್ಲ. ಆದರೂ ಸಹೃದಯವಾಚಕರ ಸೌಕರ್ಯಕ್ಕಾಗಿ ಬೇಗ ಕಾವ್ಯಾನಂದಾನುಭವಕ್ಕೆ ಅನುಕೂಲವಾಗುವಂತೆ ಕೆಲವು ಸಾರತಮವಾದ ಅಭಿಪ್ರಾಯಗಳುಳ್ಳ ವಿಷಯಗಳು ಇಲ್ಲಿ ಕಾಣಿಸಲ್ಪಡುವವು:—

## ಒಂದನೆಯ ಆಶ್ವಾಸ.

ಹಂಸವು ಹುಣ್ಣಿಮೆಯಚಂದ್ರನಂತಿದೆ. ||೨||

ರಾಮನು ರಾಜಹಂಸವನ್ನು ನೋಡಿ ಸೀತೆಯನ್ನು ಸ್ಮರಿಸಿದನೆಂದು ಹೇಳಿರುವುದು ಸೊಗಸಾಗಿದೆ. ||೩||

"ಕಾಂತಾಶ್ಲೇಷಾದಧಿಕಸುಭಗಃ ಕಾಮಿನಾಂ ದೂತಲಾಭಃ" ಈ ವಾಕ್ಯವು ಸಹೃದಯ ಹೃದಯಾಹ್ಲಾದಕವಾದುದು. ||೪||

"ವಿಶ್ಲೇಷೇಣ ಕ್ಷುಭಿತಮನಸಾಂ ಮೇಘಶೈಲದ್ರುಮಾದೌ ಯಾಚ್ಞಾ ದೈನ್ಯಂ ಭವತಿಕಿಮುತಕ್ವಾಪಿಸಂವೇದನಾರ್ಹೇ" ||

ಮೇಲಿನ ಎರಡು ಶ್ಲೋಕಗಳಲ್ಲಿ ಹೇಳಿರುವ ಅರ್ಥಾಂತರನ್ಯಾಸವು ಮನೋಹರವಾಗಿದೆ. ||೫||

ದೌತ್ಯಕ್ಕೆ ಬೇಕಾದ ಸುಗುಣಗಳು ರಾಜಹಂಸದಲ್ಲಿವೆಯೆಂದು ಹಿರಿಯರ ಅಭಿಪ್ರಾಯವನ್ನನುಸರಿಸಿ ಹೇಳಿದೆ. ||೬||

ಶ್ರೀರಾಮನು, ಹಂಸವನ್ನು ಬ್ರಹ್ಮನಂತೆ ಔದಾರ್ಯತೋರಿಸಬೇಕೆಂದೂ ಅದೇ ಒಳ್ಳೆಯಗೆಳೆಯನ ಲಕ್ಷಣವೆಂದೂ ಹೇಳಿದ್ದಾನೆ. ವಿಷಯವು ಯುಕ್ತಿಯುಕ್ತವಾಗಿದೆ. ||೭||

ಇಲ್ಲಿ ಕಥಾನಾಯಕನು ತನ್ನ ಪೂರ್ವಿಕರನ್ನು ಹೊಗಳಿದ್ದಾನೆ. ಲಂಕೆಯ ಸ್ಥಾನವನ್ನು ವರ್ಣಿಸಿ ಅಲ್ಲಿಗೆ ಹೋಗಲು ನಿನಗೆಹೊರ್ತು ಮತ್ತಾರಿಗೂ ಸಾಮರ್ಥ್ಯವಿಲ್ಲವೆಂದು ದೃಢಪಡಿಸಿರುವನು. ||೮||

ಈ ಪದ್ಯದಲ್ಲಿ ಹಂಸವು ಹೋಗಬೇಕಾದ ದಕ್ಷಿಣದಿಕ್ಕನ್ನೂ ಅಪರ ರಮಣೀಯತೆಯನ್ನೂ ವರ್ಣಿಸಿದೆ. ||೯||

ನವಿಲುಗಳಿಗೆ ವರ್ಷಾಕಾಲವು ಏಳಿಗೆಯನ್ನುಂಟುಮಾಡತಕ್ಕದ್ದು. ಹಂಸಗಳಿಗೆ ಶರತ್ಕಾಲವು. ಇವು ಸೊಗಸಾಗಿ ವರ್ಣಿತಗಳಾಗಿವೆ.

ಮೇಘಸಂದೇಶದ "ದಿಙ್ನಾಗಾನಾಂ ಪಥಿಪರಿಹರ್ರ ಸ್ಥೂಲಹಸ್ತಾವಲೇಪಾನ್" ಎಂಬ ಪದ್ಯದಂತೆ ಈ ಕವಿಯೂ ತಮ್ಮಕಾಲದ ತಮ್ಮಮೇಲೆ ಪೈಪೋಟಿನಡೆಸಿದವರ ವಿಷಯವನ್ನು ಇಲ್ಲ ಹೇಳಿದ್ದಾರೆ. ಅವರುಗೊತ್ತಾದ ಕಾಲದಲ್ಲಿ 'ಪದಕಮಲಸಹಸ್ರ' ವೆಂಬ ಗ್ರಂಥಬರೆಯಲು ಪ್ರಾರಂಭಿಸಿ 350 ಪದ್ಯಗಳಲ್ಲಿಯೇ ನಿಂತುಹೋಯಿತು. ನಮ್ಮ ಶ್ರೀ ವೆಂಕಟನಾಥರಾದರೋ ಗೊತ್ತಾದ ಹೊತ್ತಿನಲ್ಲೇ 1008 ಪದ್ಯಗಳನ್ನು ರಸವತ್ತಾಗಿ ರಚಿಸಿ "ಕವಿತಾರ್ಕಿಕಸಿಂಹ" ವೆಂಬ ಬಿರುದನ್ನು ಸ್ಥಿರೀಕರಿಸಿಕೊಂಡರು. "ವಾಚಾಲಾನಾಮಿವ" ||೧೦||

ರಾಜದೂತನಿಗೆ ಉತ್ತಮವಾದ ಉಪಚಾರಗಳು ಆಗುತ್ತವೆ:—ಗಂಧವಾಹನಿಂದ ಸೇವಿತನಾಗುವೆ. ಇಲ್ಲಿನ ವರ್ಣನೆಯು ಚಿತ್ತಾಕರ್ಷಕವಾಗಿದೆ. ||೧೧||

ಶರದೃತುವಿನವರ್ಣನೆ:—ದಾಸವಾಳದಗಿಡಗಳು (ಕಣಿಗಿಲೆ) ರಾಜಹಂಸವನ್ನು ಗಂಧದಿಂದ ಉಪಚರಿಸುತ್ತವೆಯೆಂಬವರ್ಣನೆ. ||೧೨||

ಶರತ್ಕಾಲದ ಮೋಡಗಳು ಹಂಸಕ್ಕೆ ಉಪಚಾರಮಾಡುವ ಕ್ರಮ. ಇದು ಶ್ಲಾಘಾರ್ಹವಾಗಿದೆ. ||೧೩||

ಹೀಗೆ ಹೋಗುವುದರಿಂದ ಹಂಸಕ್ಕಾಗುವ ಮುಖ್ಯವಾದ ಪ್ರಯೋಜನವನ್ನು ಹೇಳಿದೆ. ||೧೪||

ಕಮಲದಲ್ಲಿರುವ ದುಂಬಿಯು ಮೆಲ್ಲಗೆ ಇಂಪಾಗಿ ಝೇಂಕರಿಸುತ್ತಿರುವುದರ ವರ್ಣನೆಯು ಆನಂದದಾಯಕವು ||೧೫||

ತಂದೆಯು ಮಗನಿಗೆ, ಉತ್ತಮಪ್ರಭುವು ಒಳ್ಳೆಯ ಸೇವಕನಿಗೆ ಹೇಳುವ ಬುದ್ಧಿವಾದವು ಇಲ್ಲಿ ಉಕ್ತವಾಗಿದೆ. ||೧೬||

ಮುಂದೆ ಹೋಗುವಾಗ ಮೊದಲು ಇಂದ್ರನೀಲಮಣಿಮಯವಾದ ಮಾಲ್ಯವಂತಪರ್ವತವು ಸಿಕ್ಕುವುದು. ಇದರ ವರ್ಣನೆಯು ಪುರುಷಸೂಕ್ತವನ್ನು ಅನುಸರಿಸಿದೆ. ಮನೋರಂಜಕವಾಗಿದೆ. ||೧೭||

ಋಶ್ಯಮೂಕಪರ್ವತದಿಂದ ಲಂಕೆಗೆ ಹೋಗಲು ಎರಡು ದಾರಿಗಳಿವೆ. (1) ಪಶ್ಚಿಮಮಾರ್ಗ, (2) ಪೂರ್ವಮಾರ್ಗ. ಮೊದಲನೆಯದು ಹತ್ತಿರ, ಅನಾರೋಗ್ಯಕರ. ಎರಡನೆಯದು ದೂರವಾದರೂ ಆರೋಗ್ಯಕರ. ನೋಡಬೇಕಾದ ಅನೇಕ ಸನ್ನಿವೇಶಗಳುಂಟು.

ಮಲೆನಾಡು ಈಗಮಾತ್ರ ಅನಾರೋಗ್ಯವೆಂದು ತಿಳಿಯಬಾರದು. ಆರು ನೂರುವರ್ಷಗಳಿಂದಲೂ ಹೀಗೆಯೇ ಇದೆಯೆಂದು ಕವಿಯಿಂದ ಸೂಚಿತವಾಗಿದೆ. ಇದಕ್ಕೆ ಕಾರಣ ಮಿತಮೀರಿದ ಮಳೆ. ||೧೮||

ಪೂರ್ವದೇಶದ ಹಳ್ಳಿಗಳಲ್ಲಿ ವಾಸಮಾಡುವ ಸ್ತ್ರೀಯರು ವಿಶೇಷ ನಾಗರಿಕತೆಯುಳ್ಳವರಲ್ಲವಾದರೂ ಸುಂದರಿಯರು, ಇತರ ಸ್ತ್ರೀಯರಂತೆ ಹುಬ್ಬು ಹಾರಿಸುವುದೇ ಮೊದಲಾದ ಚೇಷ್ಟೆಗಳನ್ನು ಇವರು ಕಲಿತಿಲ್ಲ. ||೧೯||

ಇಲ್ಲಿ ಹೆಚ್ಚಾಗಿ ಕಬ್ಬನ್ನೂ ಬತ್ತವನ್ನೂ ಬೆಳೆಯುತ್ತಾರೆ. ಬತ್ತದಪೈರು ಫಲಕ್ಕೆಬರುವಾಗ ಪಕ್ಷಿಗಳು ತಿಂದು ಹಾಳುಮಾಡದಹಾಗೆ ರಕ್ಷಣೆಗೆ ರೈತರ ಹೆಣ್ಣುಮಕ್ಕಳು ಕುಳಿತುಕೊಳ್ಳುವರು. ಇವರು ಆಗ ವಿನೋದಕ್ಕೆ ಹೇಳುವ ಹಾಡುಗಳು ಕನ್ನಡಭಾಷೆಯವು ಮತ್ತು ತೆಲುಗುಭಾಷೆಯವು. ಈಗಿನಂತೆ ಆಕಾಲದಲ್ಲೂ ಕನ್ನಡ ತೆಲಗುಭಾಷೆಯ ಹಾಡುಗಳು ಹೆಚ್ಚು ಪ್ರಚಾರದಲ್ಲಿದ್ದವು. ಈ ಮೂಲಗ್ರಂಥಕಾರರಿಗೆ ಕನ್ನಡತೆಲುಗುಭಾಷೆಗಳ ಹಾಡುಗಳಲ್ಲಿ ಹೆಚ್ಚುಪ್ರೀತಿಯಿದ್ದಿರಬಹುದು. ಈಗಲೂ ಕರ್ಣಾಟಕಾಂಧ್ರಗೀತೆಗಳಿಗೆ ಪ್ರಾಬಲ್ಯವು ಹೆಚ್ಚಾಗಿರುವುದು ಸ್ಪಷ್ಟವಾಗುತ್ತದೆ. ||೨೦||

ಹಗುರವಾದ ಬಿಳಿಯಮೋಡಗಳಿಂದ ಆವೃತವಾದ ವೆಂಕಟಾಚಲವು ವರ್ಣಿತವಾಗಿರುವ ಕ್ರಮವು ಮನೋಹರವು. ||೨೧||

ಭಕ್ತಿಯಿಂದ ದೇವರನ್ನು ಪೂಜಿಸಿದವರಿಗೆಲ್ಲಾ (ಧ್ಯಾನಮಾಡಿದವರಿಗೆಲ್ಲಾ) ಸಮಾನಫಲಬರುತ್ತದೆ. ಭಗವಂತನಿದಿರಿಗೆ ಎಲ್ಲ ಭಕ್ತರೂ ಸಮ. ಇದರಲ್ಲಿ ವ್ಯತ್ಯಾಸವಿಲ್ಲ. ದೇವತೆಮನುಷ್ಯ, ಬಡವಬಲ್ಲಿದರೆಂಬ ಭೇದವಿಲ್ಲ. ಈ ಅಭಿಪ್ರಾಯವು ಲೋಕಕ್ಕೆ ಬಹು ಹಿತಕರವಾದುದೂ ಒಪ್ಪತಕ್ಕದ್ದೂ ಹೌದು. ||೨೨||

ಇದರ ದಕ್ಷಿಣಕ್ಕೆ ಹತ್ತಿರದಲ್ಲಿ ಕನಕಮುಖರೀನದಿಯು ಹರಿಯುತ್ತದೆ. ನೀರಿನಲ್ಲಿ ಕಾಡುಹೂಗಳು ತೇಲಿಕೊಂಡು ಬರುತ್ತಾ ಅಲೆಯಿಂದ ಸೊಗಸಾಗಿ ಕಾಣುವುದರ ವರ್ಣನವು ಬಹು ಆಹ್ಲಾದಕರವಾಗಿದೆ. ಬೇಟೆಗಾರರಿಂದ ಅಪಾಯವಾಗದಂತೆ ನೋಡಿಕೊ. ಹಂಸದಲ್ಲಿ ರಾಮನಿಗೆ ಪ್ರೀತಿಯು ಹೆಚ್ಚಾಗಿದೆಯೆಂದು ಸೂಚಿತವು. ||೨೩-೨೪||

ತುಂಡೀರಮಂಡಲದಲ್ಲಿ ವೇಗವತೀದಡದಲ್ಲಿ ಹಸ್ತಿಗಿರಿಯು (ಕಾಂಚೀ ನಗರ) ಇದೆ. ಅಲ್ಲಿಂದ ಮುಂದೆ ಸತ್ಯವ್ರತಕ್ಷೇತ್ರವು ಸಿಕ್ಕುವುದು. ||೨೫||

ಕಾಂಚೀಪುರವು ಶ್ಲೇಷೆಯಿಂದ ರಮ್ಯವಾಗಿ ವರ್ಣಿತವಾಗಿದೆ. ಕಾಂಚೀ= ಕಾಂಚೀನಗರ, ಒಡ್ಯಾಣ (ಡಾಬು). ಈ ಪಟ್ಟಣವು ನಗರಗಳಲೆಲ್ಲಾ ಉತ್ತಮವಾದುದು "ನಗರೀಷು ಕಾಂಚೀಪ್ರಖ್ಯಾತಾ". ಮಹಾಕವಿ ವೇಂಕಟನಾಥರ ಜನ್ಮಸ್ಥಳವು ಇದೇ. ||೨೬||

ಇಲ್ಲಿಗೆ ದೇವತೆಗಳೂ, ಮನುಷ್ಯರೂ, ದೇವರದರ್ಶನಕ್ಕೆ ವೈಶಾಖಮಾಸದಲ್ಲಿ ಬರುವರು. ||೨೭||

ಶ್ರೀ ಏಕಾಮ್ರೇಶ್ವರಸ್ವಾಮಿಯ ಸನ್ನಿಧಿಯಿಂದ ಬರುವ ಮಂದಮಾರುತದ ಮನೋರಂಜಕವಾದ ವರ್ಣನವು. ||೨೮||

ವೇಗವತಿಯು ಏಳುಭಾಗವಾಗಿ ಹರಿಯುತ್ತದೆ. ಇದರಲ್ಲಿ ಭಕ್ತಿಯಿಂದ ಸ್ನಾನಮಾಡಿದರೆ ಆಗುವ ಉತ್ತಮೋತ್ತಮ ಫಲವನ್ನು ಇಲ್ಲಿ ಹೇಳಿದೆ. ||೨೯-೩೦-೩೧||

ಶ್ರೀ ವರದರಾಜಸ್ವಾಮಿಯ ಮನೋಹರವಾದ ವರ್ಣನವೂ ಆಶ್ರಿತ ವಾತ್ಸಲ್ಯವೂ. ಕಾಂಚಿಯು ಕವಿಯ ಜನ್ಮಭೂಮಿಯಾದ್ದರಿಂದ ಅಭಿಮಾನವು ಹೆಚ್ಚಾಗಿರುವುದು ಸಹಜವೇ. ||೩೨-೩೩-೩೪||

ಹಂಸವು ತನ್ನ ರೆಕ್ಕೆಗಳಿಂದ ಭಗವಂತನನ್ನು ಚಾಮರದಂತೆ ಸೇವಿಸಬೇಕೆಂದು ಸೂಚಿಸಿದೆ. ||೩೫||

ತುಂಡೀರಮಂಡಲವನ್ನು ದಾಟಿದಮೇಲೆ ಚೋಳದೇಶವು ಸಿಕ್ಕುವುದು. ಅಲ್ಲಿನ ಅಡಿಕೆತೋಟ ಕಾವೇರೀನದಿಯ ಕಾಲುವೆಗಳ, ಪೈರುಬೆಳೆದಿರುವ ಭೂಮಿಗಳ ವರ್ಣನೆ. ||೩೬||

ಆ ದೇಶದ ಸುಂದರಿಯರು ಉಯ್ಯಾಲೆಯಮೇಲೆ ಕುಳಿತಿರುವುದನ್ನು ಸೊಗಸಾಗಿ ವರ್ಣಿಸಿದೆ. ||೩೭||

ಮುಂದೆ ಕೈಲಾಸವಂತೆ ಕಣ್ಗೊಳಿಸುತ್ತಿರುವ ಶ್ವೇತಾದ್ರಿಯನ್ನು (ಬಿಳಿಗಿರಿ ರಂಗನಬೆಟ್ಟ) ವರ್ಣಿಸಿರುವ ಕ್ರಮವು ಶ್ಲಾಘನೀಯವಾಗಿದೆ. ಈ ಬೆಟ್ಟವು ಕರ್ಣಾಟಕರಾಷ್ಟ್ರಕ್ಕೆ ಸೇರಿದೆ. ಈ ವರ್ಣನವು ಉತ್ತಮವಾದುದೆಂದು ಆ ಬೆಟ್ಟವನ್ನು ನೋಡಿದವರ ಅಭಿಪ್ರಾಯವು. ||೩೮||

ಶ್ವೇತಾದ್ರಿನಾಥನ ಸ್ತುತಿ. ಭಗವಂತನನ್ನು ದೀಪಕ್ಕೆ ಹೋಲಿಸಿರುವುದು ಉತ್ತಮೋತ್ತಮವಾಗಿದೆ. ||೩೯||

ಅದಾದಮೇಲೆ ರಮಣೀಯವಾದ ವಿಹಾರವನವಿದೆ. ಅದು ನೋಡತಕ್ಕದ್ದು. (ನೀಲೀವನ) ಅದರ ಅಡಿಕೆಮರಗಳ ಮತ್ತು ಮಂದಮಾರುತದ ವರ್ಣನವು ಹೃದ್ಯವಾಗಿದೆ. ||೪೦-೪೧||

ಚೋಳದೇಶದ ಮಧ್ಯದಲ್ಲೀ ನಮ್ಮ ಕಾವೇರಿಯು ಹರಿಯುತ್ತಿದೆ. ಇದರತೀರದ ಪಟ್ಟಾಪಟ್ಟೆ ಕಬ್ಬಿನವರ್ಣನೆಯು ರಸವತ್ತಾಗಿದೆ. ||೪೨||

ಅಡಕೆಹೂಗಳಿಂದ ಕೂಡಿಹರಿಯುತ್ತಿರುವ ಬೆಳಗಿನಜಾವದ ಕಾವೇರಿಯ ಸಹಜವಾದ ವರ್ಣನೆ. ||೪೩||

ಇಲ್ಲಿ ಚಂದ್ರಪುಷ್ಕರಿಣಿಯೆಂಬ ಬಹು ಸೊಗಸಾದ ಮಾನಸಸರೋವರದಂತಿರುವ ಸರಸ್ಸಿದೆ. ಇದರ ನೀರು ರೋಗಪರಿಹಾರಕವಾದುದು. ||೪೪||

ಅದರ ದಡದಲ್ಲಿ ಅನಂತಾಸನವು ನೆಲೆಗೊಂಡಿದೆ (ಸಾವಿರಕಾಲುಮಂಟಪ) ಇದರ ವರ್ಣನೆಯು ದಶೋಪನಿಷತ್ತಿನಲ್ಲಿ ಇದೆ. ||೪೫||

ಶೇಷಶಾಯಿ ಭಗವಂತನ ವರ್ಣನೆಯು. ||೪೬||

"ಶಬ್ದಾಯಂತೆ ನಖಲುಕವಯಸ್ಸನ್ನಿಧೌದುರ್ಜನಾನಾಂ" ಎಂಬ ನೀತಿವಾಕ್ಯ. ಚೋಳ ಪಾಂಡ್ಯದೇಶಗಳ ಕಾಡಿನವರ್ಣನೆ. ||೪೭||

ಪಾಂಡ್ಯದೇಶದ ಸುಂದರಿಯರ ಮನೋಜ್ಞವಾದ ವರ್ಣನೆ. ||೪೮||

ವೃಷಭಪರ್ವತದಲ್ಲಿರುವ ಪವಿತ್ರವಾದ ನೂಪುರಗಂಗಾತೀರ್ಥದ ವರ್ಣನೆ. ||೪೯||

ಪಾಂಡ್ಯದೇಶವು ಧನ, ಧಾನ್ಯ, ನಾಗರಕತೆ ಮುಂತಾದುವುಗಳಿಂದ ಪರಿಪೂರ್ಣವಾದುದೆಂಬ ವಿಷಯವು. ||೫೦||

ಮುತ್ತಿನಚಿಪ್ಪುಗಳಿಂದ ಕೂಡಿದ ತಾಮ್ರಪರ್ಣೀ ನದಿಯ ಸ್ವಭಾವ ಸಿದ್ಧವಾದ ವರ್ಣನೆಯು, ಅತ್ಯುತ್ಕೃಷ್ಟ ಚಮತ್ಕಾರವನ್ನು ಪ್ರಕಾಶ ಪಡಿಸಿದೆ. ||೫೧||

ಪ್ರಯಾಣಮಾಡಿ ಆಯಾಸಗೊಂಡ ಹಂಸದೂತನಿಗೆ ಉತ್ತಮವಾದ ಗಾಳಿ ಬೀಸಿ ಆಯಾಸಪರಿಹಾರಮಾಡುವುದು. ||೫೨||

ಸಮುದ್ರತೀರವು ಓಲೆಮರ ಮತ್ತು ಹೊಂಗೆಮರಗಳ ಕಾಡುಳ್ಳದ್ದು. ಈ ವರ್ಣನೆಯು ಸಮುದ್ರತೀರವನ್ನು ಕಣ್ಣಾರೆನೋಡಿ ಮಾಡಿರುವ ಉತ್ತಮ ತರಕ್ಕೆ ಸೇರಿದ್ದು. ||೫೩||

ಸಮುದ್ರದಡದಿಂದ ಹಾರಿಹೋಗುತ್ತಿರುವ ಹಂಸವನ್ನು ಬಾಣಕ್ಕೆ ಹೋಲಿಸಿರುವುದು ಬಹುಚೆನ್ನಾಗಿದೆ. ನದಿಯು (ತಾಮ್ರಪರ್ಣಿ) ಸಮುದ್ರಕ್ಕೆ ಸೇರುವ ಸ್ಥಳದ ವರ್ಣನೆ. ಇದನ್ನು ಓದಿದರೆ ಆ ನೋಟವು ಕಣ್ಣಿಗೆ ಕಟ್ಟಿ ದಂತಾಗುತ್ತದೆ. ||೫೪||

ಹವಳದ ಬಳ್ಳಿಗಳಿಂದ ವ್ಯಾಪ್ತವಾಗಿರುವ ಸಮುದ್ರದ ರಸವತ್ತಾದ ವರ್ಣನವು, ಆ ಸಮುದ್ರವು ಇದಿರಿಗೆ ಬಂದಂತೆಮಾಡಲು ಸಾಮರ್ಥ್ಯ ವುಳ್ಳದ್ದು. ||೫೫||

ಹಂಸಕ್ಕೆ ಹನುಮಂತನಂತೆ ಉಪಚಾರವಾಗುವುದೆಂಬ ವಿಷಯ. ||೫೬||

ಸರೋವರದ ತಾವರೆಹೂಗಳಲ್ಲಿ ಜೇನನ್ನು ಕುಡಿದು ಹಂಸವು ವಿಶ್ರಮಿಸಿ ಕೊಳ್ಳಬಹುದೆಂಬ ವಿಷಯ. ||೫೭||

ಇಲ್ಲಿನ ಹವಳಗಳು ಸಂಧ್ಯೆಯ ಸೊಗಸನ್ನು ಭೂಮಿಯಲ್ಲಿ ತೋರಿಸು ತ್ತವೆಯೆಂಬ ವಿಷಯ. ಈ ಗ್ರಂಥದ ಅತ್ಯುತ್ತಮವಾದ ವರ್ಣನೆಗಳಲ್ಲಿ ಇದು ಒಂದು. ಉತ್ತಮವಾದ ಕಲ್ಪನಾಶಕ್ತಿಯು ಪ್ರಕಾಶಿತವಾಗಿದೆ. ಓದಿದಾಗ ಸ್ವಾರಸ್ಯವು ಅನುಭವಕ್ಕೆ ಬರುವುದು. ||೫೮||

ಸುವೇಲಪರ್ವತದ ಕಾಡಿನ ವರ್ಣನೆ. ||೫೯||

ಶ್ಲೇಷೆಯಿಂದ ಲಂಕೆಯನ್ನೂ, ರಾಜಹಂಸಿಯನ್ನೂ ವರ್ಣಿಸಿರುವುದು, ಹೃದ್ಯತಮವಾಗಿದೆ. ||೬೦||

## ಎರಡನೆಯ ಆಶ್ವಾಸ.

ಇಲ್ಲಿ ಶ್ಲೇಷೆಯಿಂದ ಹಂಸವನ್ನೂ, ಸುರಯುವತಿಯರನ್ನೂ ವರ್ಣಿಸಿದೆ. ದಕ್ಷಿಣನಾಯಕ ವೃತ್ತಾಂತವೂ ಸ್ಫುರಿಸುತ್ತದೆ. ||೧||

ರಾಜಹಂಸಿಗೂ ಸೆರೆಯಲ್ಲಿರುವ ದೇವತಾಸ್ತ್ರೀಯರಿಗೂ ಸಾಮ್ಯಹೇಳಿದೆ. ಪತಿವ್ರತಾಧರ್ಮವನ್ನು ಸ್ತುತಿಸಿದೆ. ||೨||

ತ್ರಿಕೂಟಪರ್ವತವನ್ನೂ ಅದರಮೇಲಿರುವ ಲಂಕಾನಗರಿಯನ್ನೂ ಸೊಗಸಾಗಿ ವರ್ಣಿಸಿದೆ. ||೩||

ಶರತ್ಕಾಲವ ಬೆಳುದಿಂಗಳಿನ ರಾತ್ರಿಯ ರಮ್ಯವಾದ ವರ್ಣನೆ. ||೪||

ಈ ರಾಜಧಾನಿಯು ಹಿಂದೆ ಹನುಮಂತನಿಂದ ಸುಟ್ಟು ನಷ್ಟಪಟ್ಟಿತೆಂಬ ವಿಷಯ. ||೫||

ಅದರ ಮಧ್ಯದಲ್ಲಿರುವ ರಾವಣನ ಅರಮನೆಯ ಅಂದವಾದ. ವರ್ಣನೆ. ||೬||

ಅಶೋಕವನವನ್ನು ವರ್ಣಿಸಿರುವುದು ಚೆಲುವಾಗಿದೆ. ||೭||

ಪಕ್ಷಿಗಳಸ್ವಭಾವ ಶಿಂಶುಪಾವೃಕ್ಷದ ವರ್ಣನೆ. ||೮||

ಭೂಮಿಜೆಯಾದ ಸೀತೆಯನ್ನು ಗಣಿಯಿಂದ ತೆಗೆದ ರತ್ನಕ್ಕೆ ಹೋಲಿಸಿದೆ. ||೯||

ಸೀತಾದೇವಿಯ ಸೌಂದರ್ಯಾತಿಶಯದ ವರ್ಣನವು. ||೧೦||

ಆಕೆಯನ್ನು ಗುರ್ತಿಸಬಹುದಾದ ಚಿಹ್ನಗಳನ್ನು ವಿವರಿಸಿದೆ. ||೧೧-೧೨||

ರಾವಣಸಮನೆಯಲ್ಲಿ ಸೆರೆಯಾಗಿರುವ ಸೀತೆಯನ್ನು ಮಾಲೋಪಮಾಲಂಕಾರದಿಂದ ವರ್ಣನೆಮಾಡಿರುವುದು ರಮಣೀಯವಾಗಿದೆ. ||೧೩-೧೪||

ಸೀತೆಯ ದೀನಾವಸ್ಥೆಯ ವರ್ಣನೆ. ||೧೫-೧೬||

ಜಾನಕಿಯು ದುಃಖದಿಂದ ಅಳುತ್ತಿದ್ದಾಳೆ. ಅದರ ವರ್ಣನೆ. ||೧೭||

ಲಾವಣ್ಯವತಿಯಾದ ಸೀತೆಯ ತಲೆಗೂದಲು ಮೈಮೇಲೆ ಹರಡಿರುವುದರ ವರ್ಣನೆಯು ಉತ್ತಮೋತ್ತಮವಾಗಿದೆ. ಸೀತೆಯ ಸೌಕುಮಾರ್ಯವು

ಲೋಕೋತ್ತರವಾದುದು. ಈಕೆಯು ಪ್ರೋಷಿತಭರ್ತೃಕೆಯರಿಗೆ ಉತ್ತಮ ವಾದ ಉದಾಹರಣೆಯಾಗಿದ್ದಾಳೆ. ||೧೮||

ಪೀತಾಂಬರಹೊದೆದಿರುವ ಸೀತೆಯು ಸಂಧ್ಯಾಕಾಲದ ಚಂದ್ರಕಲೆಗಿಂತಲೂ ಮನೋಹರಳು. ಇದು ರಮಣೀಯವಾದ ವರ್ಣನೆಗಳಲ್ಲಿ ಮುಖ್ಯವಾದುದು. ಓದುವಾಗ ಸ್ವಾರಸ್ಯವು ಮನದಟ್ಟು ಆಗುವುದು. ||೧೯||

ರಾಮನಿಗೆ ಸೀತೆಯಲ್ಲಿರುವ ಪ್ರೀತ್ಯತಿಶಯವು, ತನ್ನ ಮನಸ್ತೃಪ್ತಿಗೋಸ್ಕರ ಆಕೆಗೆ ಆಭರಣತೊಡಿಸುತ್ತಿದ್ದ ವಿಷಯದ ವರ್ಣನೆಯ ಮೂಲಕ ಸ್ಪಷ್ಟಪಡಿಸಿದೆ. ||೨೦||

ವೈದೇಹಿಯನ್ನು. ಬಿಸಿಲಿಂದಬಾಡಿ ಹೂಗಳುದುರಿದ ಬಳ್ಳಿಯನ್ನಾಗಿಯೂ, ಸೆರೆಯಾಗಿರುವ ಇಂದ್ರೋದ್ಯಾನ ಲಕ್ಷ್ಮಿಯನ್ನಾಗಿಯೂ ವರ್ಣಿಸಿರುವುದರ ಔಚಿತ್ಯವು ಶ್ಲಾಘ್ಯವಾಗಿದೆ. ||೨೧||

ಪತಿಯನ್ನೇ ಧ್ಯಾನಿಸುತ್ತಿರುವ ಭೂಮಿಜೆಯನ್ನು ಯೋಗಾಭ್ಯಾಸದಿಂದ ಭಗವಂತನನ್ನು ಒಲಿಸಿಕೊಳ್ಳುವ ಯೋಗಿಯನ್ನಾಗಿವರ್ಣಿಸಿದೆ. ||೨೨||

ದುಃಖಿಸುತ್ತಿರುವ ಸೀತೆಯ ವರ್ಣನೆ. ||೨೩||

ಆಕೆಯಸ್ಥಿತಿಯನ್ನು ನೋಡಿ ತಿರ್ಯಗ್ಜಂತುವಾದ ಹಂಸವೂ ದುಃಖಪಡುವುದು. ||೨೪||

ಹಂಸವು ಹತ್ತಿರದಲ್ಲಿರುವ ಕೊಳದಲ್ಲಿ ನೀರನ್ನು ಕುಡಿದು ವಿಶ್ರಮಿಸಿ ಆಯಾಸವನ್ನು ಕಳೆದುಕೊಳ್ಳಬಹುದು. ||೨೫||

ನೀನು ಬೆಳಗಿನಜಾವ ಹೊತ್ತಿಗೆಮುಂಚೆ ಏಳಬೇಕು. ||೨೬||

ಹತ್ತಿರದಲ್ಲಿರುವ ಅಗರುವೃಕ್ಷದಮೇಲೆ ಕುಳಿತುಕೊಂಡು ಮೆಲ್ಲಗೆ ಮಾತನಾಡಿಸಿ. ನೀನು ಆಕೆಯು ನಿನ್ನನ್ನು ನಂಬುವಂತೆ ಮಾಡು. ||೨೭||

ಶರತ್ಕಾಲದಲ್ಲಿ ಹಂಸವು ಕ್ಷತ್ರಿಯಸ್ತ್ರೀಯರಿಗೂ, ವೀರಕ್ಷತ್ರಿಯರಿಗೂ, ತನ್ನ ಕೂಗಿನಿಂದ ಸೂಚಿಸುವುದೇನೆಂಬವಿಷಯ. ||೨೮||

ಹಂಸಕ್ಕೆ, ಬಹುಮಾನಸಹಿತವಾದ ಸೀತಾದೇವಿಯ ದರ್ಶನವು ದೊರೆಯುವುದು. ||೨೯||

ಇಲ್ಲಿ ಹೇಳಿರುವ ಅರ್ಥಾಂತರನ್ಯಾಸವು ಮನೋಹರವಾಗಿದೆ. ||೩೦||

ಮೊದಲು ಹಂಸವು, ಸೀತೆಗೆ ಪ್ರಿಯನ ಕ್ಷೇಮಸಮಾಚಾರವನ್ನು ತಿಳಿಸಿ, ಆಮೇಲೆ ಆಕೆಯ ಕುಶಲವೃತ್ತಾಂತವನ್ನು ಕೇಳಬೇಕೆಂದು ನಿಯಮಿಸುತ್ತಾನೆ. ||೩೧||

ಸೀತೆಯು ದೂರದಲ್ಲಿದ್ದರೂ, ಹತ್ತಿರದಲ್ಲಿದ್ದಂತೆಯೇ ರಾಮನು ಭಾವಿಸುತ್ತಾನೆ. ||೩೨||

ಆಕೆಯಿಂದ ಅವನು ಅಗಲಿದಂದಿನಿಂದ ಅನುಭವಿಸುವ ದುಃಖದ ವರ್ಣನೆ. ||೩೩||

ಶಿಶಿರಋತುವಿನವರ್ಣನೆ. ||೩೪||

ವಸಂತಋತು ಮಾಧ್ವೀಪುಷ್ಪಗಳ ವರ್ಣನೆ. ||೩೫||

ಕೋಗಿಲೆ ಮಲ್ಲಿಗೆಹೂವು ದುಂಬಿಗಳ ವರ್ಣನೆ. ಆನೆಗಳನ್ನು ಪಡ್ಡಾ ಕ್ರಮದಿಂದ ಹಿಡಿದಾದಮೇಲೆ ಪಳಗಿಸುವ ಕ್ರಮ. ||೩೬||

ಬಿಳಿಯ ಹೂಬಿಟ್ಟಿರುವ ಚಿರಬಿಲ್ವವೃಕ್ಷಗಳ, ಕೆಂಪುಹೂಗೊಂಚಲುಳ ಅಶೋಕವೃಕ್ಷಗಳ ವರ್ಣನೆ. ||೩೭||

ಮಾಲ್ಯವಂತಶಿಖರದ ಮೇಲೆ, ಸಂತೋಷದಿಂದ ಕುಣಿಯುತ್ತಿರುವ ನವಿಲಿನ ವರ್ಣನೆ. ||೩೮||

ಇದು ಮುಂಗಾರಿನ ಉತ್ತಮವಾದ ವರ್ಣನವು. ||೩೯||

ರಾಮನು, ಸೀತೆಯು ದೂರದಲ್ಲಿದ್ದರೂ, ಆಕೆಯನ್ನು ಸ್ಮರಿಸಿ ಸಮಾಧಾನಮಾಡಿಕೊಳ್ಳುವಬಗೆ. ||೪೦||

ಶರತ್ಕಾಲದ ಶ್ಲಾಘ್ಯವಾದ ವರ್ಣನೆ. ||೪೧||

ರಾಜಧಾನಿಯನ್ನು ಬಿಟ್ಟು, ಕಾಡಿಗೆ ರಾಮನೊಡನೆ ಬಂದ ಸೀತೆಯ ಪತಿಭಕ್ತಿಯ ಶ್ಲಾಘನೆ. ||೪೨||

ವಾನರವೀರರಕೈಗೆ ಸಿಕ್ಕಿದ ಲಂಕೆಯ ವರ್ಣನವು. "ಕಪಿಯಕೈಗೆ ಹೂಮಾಲೆ ಸಿಕ್ಕಿದಹಾಗೆ" ಎಂಬ ಗಾದೆಯ ನೆನಪು ||೪೩||

ರಾವಣನನ್ನು ಸಂಹರಿಸಿದ ಮೇಲೆ ಒದಗುವ ಶುಭಪರಂಪರೆಯ ಪ್ರಸ್ತಾಪ. ||೪೪||

ಜನಸ್ಥಾನದ ಯುದ್ಧಾನಂತರ ಪಟ್ಟ ಸಂತೋಷವನ್ನು, ರಾವಣ ವಧಾನಂತರವೂ ಪಡಬಹುದೆಂದು ಸೀತೆಗೆ ನಂಬುಗೆಗೊಡುವುದು. ||೪೫||

ಕಷ್ಟವನ್ನನುಭವಿಸಿದಮೇಲೆ ಸುಖವು ತಪ್ಪದೇ ಒದಗುವುದು. ಶಚೀ ದೇವಿಯ ಮಾರ್ಗವನ್ನು ಅನುಸರಿಸಬೇಕು. ಇಲ್ಲಿನ ನೀತಿಯು ಉತ್ತಮ ವಾದುದು. ||೪೬||

ಹಂಸವು ಹಿಂದಿನಕಾಲದಲ್ಲಿ, ನಳರಾಜನ ಸಂದೇಶವನ್ನು ದಮಯಂತಿಗೆ ತಲಪಿಸಿದಂತೆಯೇ ಈಗಲೂ ತನ್ನ (ರಾಮನ) ಸಂದೇಶವನ್ನು ಸೀತೆಗೆ ತೆಗೆದು ಕೊಂಡು ಹೋಗಿ ಕೊಟ್ಟೇಕೊಡುವುದೆಂಬ ವಿಷಯ. ||೪೭||

ಸೀತೆಗೆ ಸಂದೇಶತಲಪಿಸಿದ ಮೇಲೆ, ಹಂಸವು ತನ್ನ ಪತ್ನಿಯೊಡನೆ ಸಂತೋಷವಾಗಿರಬಹುದು ||೪೮||

ರಾಮನು ಸಮುದ್ರವನ್ನು ದಾಟಿ, ಯುದ್ಧದಲ್ಲಿ ರಾವಣನನ್ನು ಕೊಂದು ಸೀತೆಯನ್ನು ಸೆರೆಯಿಂದ ಬಿಡಿಸಿದನು. ಅಯೋಧ್ಯೆಗೆಸೇರಿ ಪಟ್ಟಾಭಿ ಷಿಕ್ತನಾಗಿ ರಾಜ್ಯವನ್ನು ಉತ್ತಮವಾಗಿ ಆಳಲು ಮೊದಲುಮಾಡಿದನು. ||೪೯||

ಫಲಶ್ರುತಿ ಮತ್ತು ಸಜ್ಜನರನ್ನು ಪ್ರಾರ್ಥಿಸುವುದು. ||೫೦||





ಯುವರಾಜ ಕುಮಾರರು
ಶ್ರೀಮತ್ ಶ್ರೀ ಜಯಚಾಮರಾಜೇಂದ್ರ ಒಡೆಯರವರು
ಮತ್ತು ಅವರ ಧರ್ಮಪತ್ನಿ
ಶ್ರೀಮತಿ ಸತ್ಯಪ್ರೇಮಕುಮಾರೀದೇವಿಯವರು.

# ಪೂರ್ವಕಥೆ.



ಶ್ರೀರಾಮನು, ತಂದೆಯಮಾತನ್ನು ಉಳಿಸುವುದಕ್ಕೋಸ್ಕರ ಸೀತಾಲಕ್ಷ್ಮಣಸಮೇತನಾಗಿ ಅಯೋಧ್ಯೆಯನ್ನು ಬಿಟ್ಟು ಕಾಡಿಗೆ ಬಂದನು. ಅಲ್ಲಿನ ಋಷಿಗಳಿಗೆ ತೊಂದರೆಕೊಡುತ್ತಿದ್ದ ಕಬಂಧ ಖರ ದೂಷಣ ತ್ರಿಶಿರರನ್ನು ಸೋಲಿಸಿ ಕೊಂದದ್ದಾಯಿತು.

ಲಂಕೆಯರಾಜನಾದ ರಾವಣನು, ಶೂರ್ಪನಖಿಯೆಂಬ ಸೋದರಿಯ ದುಷ್ಪ್ರೇರಣೆಯಿಂದ ಮಾರೀಚನಮೂಲಕ ರಾಮಲಕ್ಷ್ಮಣರನ್ನು ಸೀತೆಯಿಂದ ಅಗಲಿಸಿ ಅವರಿಲ್ಲದಿದ್ದಾಗ ಆಕೆಯನ್ನು ಬಲಾತ್ಕಾರದಿಂದ ಲಂಕೆಗೆ ಕರೆದುಕೊಂಡುಹೋದುದು ಪ್ರಸಿದ್ಧವಾಗಿದೆ.

ಆಮೇಲೆ ರಾಮಲಕ್ಷ್ಮಣರು, ಸೀತೆಯನ್ನು ಕಾಣದೆ ದುಃಖಿಸಿ ಗೋದಾವರೀತೀರದಿಂದ ದಕ್ಷಿಣಕ್ಕೆಬಂದು ತುಂಗಭದ್ರೆಯ ಸಮೀಪದಲ್ಲಿ ಕಿಷ್ಕಿಂಧಾಪಟ್ಟಣದ ಹತ್ತಿರದಲ್ಲಿದ್ದ ಋಶ್ಯಮೂಕಕ್ಕೆ ತಲಪಿದರು. ಹನುಮಂತನ ಮೂಲಕ ಸುಗ್ರೀವನ ಸ್ನೇಹವಾಯಿತು. ಈತನಿಗೆ ಸಹಾಯಮಾಡಿ ಇವನ ಕಪಿಸೇನೆಯ ಸಹಾಯದಿಂದ ಸೀತೆಯಿರುವ ಸ್ಥಳವನ್ನು ಪತ್ತೆಮಾಡಲು ಪ್ರಯತ್ನಿಸಿದನು.

ಕಡೆಗೆ ಹನುಮಂತನಮೂಲಕ, ಆಕೆಯಿರುವ ಸ್ಥಳವು ಲಂಕಾನಗರಿಯ ಅಶೋಕವನವೆಂದು ತಿಳಿದುಬಂದಿತು. ಅಲ್ಲದೆ ಆಕೆಯು ಹನುಮಂತನ ಮೂಲಕ ಕಳುಹಿಸಿಕೊಟ್ಟ ಚೂಡಾಮಣಿ ಮತ್ತು ಸಮಾಚಾರಗಳಿಂದ ರಾಮನು ಸಂತೋಷಪಟ್ಟನು.

ಮಾರನೇದಿನ ಬೆಳಿಗ್ಗೆ ಹೊರಗಡೆ ಸಂಚರಿಸುತ್ತಿರುವಾಗ ಕಮಲಗಳಿಂದ ಕೂಡಿದ ಸರೋವರದಲ್ಲಿ ರಾಜಹಂಸವನ್ನು ಕಂಡನು. ಇದರ ಮೂಲಕ ರಾಮನು ಸೀತೆಗೆ ಸಂದೇಶವನ್ನು ಕಳುಹಿಸಿಕೊಡುತ್ತಾನೆಂಬುದು ಈ ಗ್ರಂಥದಲ್ಲಿ ಹೇಳುವ ವಿಷಯವು.

॥ ಶ್ರೀಃ ॥

ಜ್ಞಾನಾನಂದಮಯಂದೇವಂ ನಿರ್ಮಲಸ್ಫಟಿಕಾಕೃತಿಂ ।
ಆಧಾರಂ ಸರ್ವವಿದ್ಯಾನಾಂ ಹಯಗ್ರೀವಮುಪಾಸ್ಮಹೇ ॥
ಜಯತ್ಯಾಶ್ರಿತಸಂತ್ರಾಸಧ್ವಾಂತವಿಧ್ವಂಸನೋದಯಃ ।
ಪ್ರಭಾವಾನ್ ಸೀತಯಾದೇವ್ಯಾ ಪರಮವ್ಯೋಮಭಾಸ್ಕರಃ ॥
ವಂದೇ ವೃಂದಾವನಚರಂ ವಲ್ಲವೀಜನವಲ್ಲಭಂ ।
ಜಯಂತೀಸಂಭವಂ ಧಾಮ ವೈಜಯಂತೀವಿಭೂಷಣಂ ॥

# ಕರ್ಣಾಟಕ ಹಂಸಸಂದೇಶ

## ಮೊದಲನೆಯ ಆಶ್ವಾಸ.

### ಪದ್ಯ ೧.

ವಂಶೇ ಜಾತಸ್ಸವಿತುರನಘೇ ಮಾನಯನ್ಮಾನುಷತ್ವಂ
ದೇವಶ್ಶ್ರೀಮಾನ್ ಜನಕತನಯಾನ್ವೇಷಣೇ ಜಾಗರೂಕಃ ।
ಪ್ರತ್ಯಾಯಾತೇ ಪವನತನಯೇ ನಿಶ್ಚಿತಾರ್ಥಸ್ಸಕಾಮೀ
ಕಲ್ಪಾಕಾರಾಂ ಕಥಮಪಿ ನಿಶಾಮಾವಿಭಾತಂವಿಷೇಹೇ ॥

ಶ್ರೀಮನ್ನಾರಾಯಣದೇವನು, ಮನುಷ್ಯತ್ವಕ್ಕೆ ಮರ್ಯಾದೆ ಕೊಡಬೇಕೆಂಬ ಉದ್ದೇಶದಿಂದಲೇ ಪಾಪಹರವಾದ ಸೂರ್ಯವಂಶದಲ್ಲಿ ಶ್ರೀರಾಮನಾಗಿ ಅವತರಿಸಿ, ಸೀತೆಯನ್ನು ಹುಡುಕುವುದರಲ್ಲಿ ಜಾಗರೂಕನಾಗಿ, ಹನುಮಂತನು, ಸೀತಾವೃತ್ತಾಂತತಿಳಿದು ಹಿಂದಿರುಗಿ ಬಂದಮೇಲೆ, ಅವಳನ್ನು ಹಿಂದಕ್ಕೆ ಕರೆದುತರಬೇಕೆಂದೇ ನಿಷ್ಕರ್ಷಿಸಿದನು.

ಆದುದರಿಂದಲೇ ಕೇವಲದುಃಖಸಾಧ್ಯವಾಗುವ ವಿರಹತಾಪದಿಂದ * ಕಲ್ಪಪ್ರಾಯವಾದರಾತ್ರಿಯನ್ನು ಹೇಗೋ ಬೆಳಗಾಗುವವರೆಗೆ ಕಳೆದನು. ||೧||

ಟಿಪ್ಪಣಿ:—* ಯುಗದಂತೆ ಆದ. (ಕೃತಯುಗಕ್ಕೆ ಏಳುಸಾವಿರವರ್ಷ, ಕಲಿಯುಗಕ್ಕೆ ಇಪ್ಪತ್ತೆಂಟುಸಾವಿರ ವರ್ಷ.)

"ರಾಮನು ಧೀರೋದಾತ್ತನಾಯಕನು."

ದಯಾವಾನತಿಗಂಭೀರೋ ವಿನೀತಸ್ಸತ್ವಸಾರವಾನ್ ।
ದೃಢವ್ರತಸ್ತಿತಿಕ್ಷಾವಾನಾತ್ಮಶ್ಲಾಘಾಪರಾಙ್ಮುಖಃ ॥
ನಿಗೂಢಾಹಂಕೃತಿರ್ಧೀರೋ ಧೀರೋದಾತ್ತ ಉದಾಹೃತಃ ॥

**ಪದ್ಯ ೨.**

ಕಾಲ್ಯೇಸೇನಾಂ ಕಪಿಕುಲಪತೇಸ್ತೂರ್ಣಮುದ್ಯೋಜಯಿಷ್ಯನ್
ದೂರೀಭಾವಾಜ್ಜನಕದುಹಿತುರ್ದೂಯಮಾನಾಂತರಾತ್ಮಾ ।
ಕ್ರೀಡಾಖೇಲಂ ಕಮಲಸರಸಿ ಕ್ವಾಪಿ ಕಾಲೋಪಯಾತಂ
ರಾಕಾಚಂದ್ರದ್ಯುತಿಸಹಚರಂ ರಾಜಹಂಸಂ ದದರ್ಶ ॥

ಮಾರನೇದಿನಬೆಳಿಗ್ಗೆ ಸುಗ್ರೀವನ ಸೇನೆಯನ್ನು, ಲಂಕೆಯನ್ನು ಮುತ್ತುವುದಕ್ಕೆ ತತ್ ಕ್ಷಣವೇ ನಿಯಮಿಸಿದನು. ಸೀತೆಯನ್ನು ಅಗಲಿ ಬಹಳದೂರದಲ್ಲಿರುವುದರಿಂದ ಮನನೊಂದುಕೊಂಡನು.

ಕಮಲದಸರೋವರದಲ್ಲಿರುವ, ಶರತ್ಕಾಲದಲ್ಲಿ ಮಾನಸಸರೋವರದಿಂದ ಅಲ್ಲಿಗೆಬಂದು * ಮನೋಹರವಾಗಿ ಮೆಲ್ಲನೆನಡೆಯುತ್ತಿರುವ ‡ ಹುಣ್ಣಿಮೆಚಂದ್ರನ ಕಾಂತಿಯಂತೆ ಕಾಂತಿಯುಳ್ಳ ಉತ್ತಮವಾದ ರಾಜಹಂಸವನ್ನು ನೋಡಿದನು.

ಟಿಪ್ಪಣಿ: —* ವಿನೋದಕ್ಕಾಗಿಯೇ ಮೆಲ್ಲನೆನಡೆಯುತ್ತಿರುವ. (ಸವಿಲಾಸವಾದ ಗಮನವುಳ್ಳ.)

‡ ಸೊಗಸುವಂತೆ ಬೆಳ್ಳಗಿರುವ.

### ಪದ್ಯ ೩.

ತಸ್ಮಿನ್ ಸೀತಾಗತಿಮನುಗತೇ ತದ್ದುಕೂಲಾಂಕಮೂರ್ತೌ
ತನ್ಮಂಜೀರಪ್ರತಿಮನಿನದೇ ನ್ಯಸ್ತನಿಸ್ಪಂದದೃಷ್ಟಿಃ ।
ವೀರಶ್ರೇಷ್ಠೋ ವಿಲಯಮಗಮತ್ ತನ್ಮಯಾತ್ಮಾ ಮುಹೂರ್ತಂ
ಶಂಕೇ ತೀವ್ರಂ ಭವತಿ ಸಮಯೇ ಶಾಸನಂ ಮೀನಕೇತೋಃ ॥

ಸೀತೆಯಂತೆ ಉತ್ತಮವಾದನಡಿಗೆಯುಳ್ಳ, * ಅವಳ ಬಿಳಿಯ ರೇಷ್ಮೆಯಸೀರೆಯಂತೆ ಫಳಫಳಿಸುತ್ತಿರುವ, ಆಕೆಯ ಕಾಲಂದುಗೆಗಳ ಧ್ವನಿಯಂತೆಧ್ವನಿಯುಳ್ಳ, ತಾನಾಗಿಯೇಬಂದ ರಾಜಹಂಸದಲ್ಲಿ ನೆಟ್ಟಕಣ್ಣುಳ್ಳವನಾಗಿ ಅದರಲ್ಲೇ ಮನಸ್ಸನ್ನಿಟ್ಟನು.

ಸ್ವಲ್ಪಕಾಲ ‡ ಶೂನ್ಯಾಂತಃಕರಣನಾದನು. ಇದು ನ್ಯಾಯವೇ ಆಗಿದೆಯಲ್ಲವೆ.

† ಸಮಯವಿಶೇಷದಲ್ಲಿ ಮನ್ಮಥನ÷ಪ್ರಭಾವವು ಬಹಳತೀಕ್ಷ್ಣವಾಗುವುದು. ಎಂದರೆ ಪ್ರತಿಘಟಿಸಲು ಅಸಾಧ್ಯವಾಗುವುದು.

ಟಿಪ್ಪಣಿ:—* ಅವಳ ದುಕೂಲಕ್ಕೆ ಚಿನ್ನದಸಲಿಗೆಗಳಿಂದನೆಯ್ದಿರುವ ರಾಜಹಂಸದ ಚಿತ್ರಗಳಿಂದ ಅಲಂಕಾರವಾಗಿದೆ (ದುಕೂಲ=ಉಡುಗೆ.)

‡ ಕಡೆಗೆ ಸ್ವಲ್ಪಹೊತ್ತು ಮನಸ್ಸುಅಳಿದುಹೋಗಿ ಸೀತಾಮಯವಾದ ಅಂತಃಕರಣವುಳ್ಳವನಾದನು.

† ವಿರಹಕಾಲದಲ್ಲಿ.
÷ ಪ್ರಭುತ್ವ, ಮಹಿಮೆ.

ಹಂಸದ ನಡೆಯು ಸೀತೆಯನಡಿಗೆಯನ್ನೂ, ಅದರ ಮೈಬಣ್ಣವು ಅವಳ *ಉಡುಗೆಯವರ್ಣವನ್ನೂ, ಅದರ, ಧ್ವನಿಯು ಆಕೆಯ ‡ ಕಾಲಂದುಗೆಗಳ ಧ್ವನಿಯನ್ನೂ ಹೋಲುತ್ತಿತ್ತು. ಇದನ್ನು ನೋಡಿ ರಾಮನು ಸೀತೆಯನ್ನು ಸ್ಮರಿಸಿ ಅವಳಲ್ಲೇ ಲೀನಮನಸ್ಕನಾದನು. ಸಮಯವಿಶೇಷದಲ್ಲಿ ಮನ್ಮಥನಮಹಿಮೆಯು ಬಹುಕಠಿನವಾಗುವುದಲ್ಲವೇ.

ಟಿಪ್ಪಣಿ:—* ಬಿಳಿಯರೇಷ್ಮೆಯ ಸೀರೆಯ.

‡ ಕಾಲ್ತೊಡುಗೆಗಳ.

## ಪದ್ಯ ೪.

ಲಬ್ಧಾಶ್ವಾಸಃ ಕಥಮಪಿ ತದಾ ಲಕ್ಷ್ಮಣಸ್ಯಾಗ್ರಜನ್ಮಾ
ಸಂದೇಶೇನ ಪ್ರಣಯಮಹತಾ ಮೈಥಿಲೀಂ ಜೀವಯಿಷ್ಯನ್ ।
ಚಕ್ರೇ ತಸ್ಮೈ ಸರಸಿಜದಳೈಸ್ಸೋಪಚಾರಾಂ ಸಪರ್ಯಾಂ
ಕಾಂತಾಶ್ಲೇಷಾದಧಿಕಸುಭಗಃ ಕಾಮಿನಾಂ ದೂತಲಾಭಃ ॥

ಆಗ ರಾಮನು ಬಹಳಕಷ್ಟದಿಂದ ಮನಸ್ಸನ್ನು ಸಮಾಧಾನಕ್ಕೆ ತಂದುಕೊಂಡು, ಪ್ರೀತಿಯಿಂದ ಗೌರವಿಸುವುದಕ್ಕೆಯೋಗ್ಯವಾಗಿರುವ ತನ್ನಸಮಾಚಾರವನ್ನುಕಳುಹಿಸುವುದರಿಂದ ಸೀತೆಯನ್ನು ಬದುಕಿಸಲು ಆಸೆಪಟ್ಟನು.

ಆದುದರಿಂದ ಆ ಹಂಸವನ್ನು ತಾವರೆಯೆಲೆಗಳಿಂದ ಪ್ರೀತಿಪೂರ್ವಕವಾಗಿ ಉಪಚರಿಸಿದನು. ಕಾಮುಕರಿಗೆ, ಸಮಾಚಾರ ತೆಗೆದುಕೊಂಡುಹೋಗುವವನು ದೊರೆಯುವುದು ಕಾಂತೆಯ *ಆಶ್ಲೇಷಕ್ಕಿಂತಲೂ ಹೆಚ್ಚು ಸಂತೋಷಕರವಾದುದು.

ಟಿಪ್ಪಣಿ:—* ಆಲಿಂಗನ.

## ಪದ್ಯ ೫.

ಕೃತ್ವಾ ತಸ್ಮಿನ್ ಬಹುಮತಿಮಸೌ ಭೂಯಸೀಮಾಂಜನೇಯಾತ್
ಗಾಢೋನ್ಮಾದಃ ಪ್ರಣಯಪದವೀಂ ಪ್ರಾಪ ವಾರ್ತಾನಭಿಜ್ಞೇ ।
ವಿಶ್ಲೇಷೇಣ ಕ್ಷುಭಿತಮನಸಾಂ ಮೇಘಶೈಲದ್ರುಮಾದೌ
ಯಾಚ್ಞಾದೈನ್ಯಂ ಭವತಿ ಕಿಮುತ ಕ್ವಾಪಿ ಸಂವೇದನಾರ್ಹೇ ॥

ಆತನು *ತೀವ್ರವಾದ ಚಿತ್ತವಿಭ್ರಮವುಳ್ಳವನಾಗಿ, ‡ಹೇಳಿದ ವೃತ್ತಾಂತವನ್ನುಗ್ರಹಿಸಲಾರದ ಆ ರಾಜಹಂಸವನ್ನು ಆಂಜನೇಯನಿಗಿಂತಲೂ ಬಹುಹೆಚ್ಚಾಗಿ †ಪ್ರೀತಿಸಿ ಪ್ರಿಯಳಿಗೆ ತನ್ನವೃತ್ತಾಂತವನ್ನು ತಲಪಿಸುವುದಕ್ಕೋಸ್ಕರ ಅದನ್ನು ÷ಬೇಡಲುಪ್ರಯತ್ನಿಸಿದನು.

ನಲ್ಲಳ ಅಗಲಿಕೆಯಿಂದ ಚಂಚಲಮನಸ್ಕರಾದವರಿಗೆ ಮೋಡ ಬೆಟ್ಟ ಮರ ಮೊದಲಾದವುಗಳನ್ನು ಬೇಡುವುದೆಂಬ ದೀನತೆಯುಂಟಾಗುತ್ತದೆ. ಸುಖದುಃಖಗಳ ತಿಳಿವಳಿಕೆಗೆ ಯೋಗ್ಯವಾದ ಪ್ರಾಣಿಮಾತ್ರದಲ್ಲಿ ಬೇಡಿಕೆಯೆಂಬ ದೀನತೆಯು ಆಗುವುದೆಂಬುದು ಹೇಳತಕ್ಕದ್ದೇನು?

ಅಗಲಿಕೆಯ ದೀನತೆಯಿಂದ ಮಿತಿಮೀರಿದ ವಿಭ್ರಾಂತಿಯುಳ್ಳವರಿಗೆ, ಅಚೇತನಗಳಲ್ಲೂ ಬೇಡಿಕೆಯ ದೀನತೆಯು ಆಶ್ಚರ್ಯಗೊಳಿಸದೇ ಇರಲಾಗಿ ಪ್ರಾಣಿಮಾತ್ರವಾದಹಂಸದಲ್ಲಿ ಆರೀತಿ ದೀನತೆಯು ಯಾರಿಗೂ ಆಶ್ಚರ್ಯವನ್ನುಂಟುಮಾಡುವುದಿಲ್ಲ.

ಯಕ್ಷನು, ಅಚೇತನವಾದಮೋಡವನ್ನು ಸಂದೇಶತೆಗೆದುಕೊಂಡುಹೋಗಲು ಬೇಡಿದನು. ರಾಮನಾದರೋ ಸಚೇತನವಾದಹಂಸವನ್ನು ಸಂದೇಶಹರಣಕ್ಕೆ ಯಾಚಿಸಿದನು, ಇದರಲ್ಲಿ ಆಶ್ಚರ್ಯವೇನಿದೆ?

ಟಿಪ್ಪಣಿ:—* ಮಿತಿಮೀರಿದ.
‡ ತಿಳಿಯಲು ಹೆಚ್ಚುಸಾಮರ್ಥ್ಯವಿಲ್ಲದ.
† ಸನ್ಮಾನಿಸಿ.
÷ ಸ್ನೇಹಿತನಂತೆ ಭಾವಿಸಲು ಪ್ರಯತ್ನಪಟ್ಟನು.

### ಪದ್ಯ ೬.

ವೇದೋದನ್ವದ್ವಿಭಜನವಿದೋ ವಂಶಜಂ ವಿಶ್ವಮೂರ್ತೇಃ
ಆಹುಸ್ಸಿದ್ಧಾಃ ಕಮಲವಸತೇರೌಪವಾಹ್ಯಂ ಭವಂತಂ |
ಲಬ್ಧಂ ಯೇನ ಪ್ರಗುಣಗತಿನಾ ತತ್ಪ್ರಿಯಾಯಾಸ್ಸಕಾಶಾತ್
ತತ್ಸಾವರ್ಣ್ಯಂ ಶ್ರವಣರಸನಾಸ್ವಾದಯೋಗ್ಯಾ ಸುಧಾಚ ||

ವೇದವು ಮೊದಲು ಸಮುದ್ರದಂತೆ ಅಖಂಡವಾಗಿತ್ತು. ಇದನ್ನು ಭಗವಾನ್ ನಾರಾಯಣನು ಹಂಸಾವತಾರಮಾಡಿ ಸೃಷ್ಟಿಗೆ ಮೊದಲು

ಬ್ರಹ್ಮನಿಗೆ ಬೇರೆಬೇರೆಯಾಗಿ ವಿಂಗಡಿಸಿ ಉಪದೇಶಿಸಿದನು. ಅವನು ಎಲ್ಲೆಲ್ಲೂ ಇದ್ದಾನೆ. ನೀನು ಆ ಭಗವಂತನ ವಂಶದಲ್ಲಿ ಹುಟ್ಟಿದವನು. ನಿನ್ನನ್ನು ಆ ನಾರಾಯಣನ ನಾಭಿಕಮಲದಲ್ಲಿಹುಟ್ಟಿದ ಬ್ರಹ್ಮನಿಗೆ ಉತ್ತಮವಾದವಾಹನವನ್ನಾಗಿ ಯೋಗಿಗಳು ಎಣಿಸುವರು.

ಎಲೈರಾಜಹಂಸವೇ, ನೀನು * ಉತ್ತಮವಾದನಡಿಗೆಯುಳ್ಳವನು. ಯಾವಾಗಲೂ ಬ್ರಹ್ಮನ ಪತ್ನಿಯಾದಸರಸ್ವತೀದೇವಿಯ ಸನ್ನಿಧಿಯಲ್ಲೇ ಇರುವುದರಿಂದ ಆದೇವಿಯ ‡ ಧವಳವರ್ಣವೂ ಕಿವಿಗಳೆಂಬನಾಲಿಗೆಯಿಂದ ಅನುಭವಿಸಲುಯೋಗ್ಯವಾಗಿರುವ ಅಮೃತವೆಂದೂ ತಿಳಿದಿರುವ ಮನೋಹರವಾದಧ್ವನಿಯೂ ನಿನಗೆಬಂದು ಸೇರಿದೆಯಲ್ಲವೇ? ಹಂಸವು ಸರಸ್ವತೀದೇವಿಯಂತೆ ಮನೋಹರವಾದ ಬಿಳಿಯುವರ್ಣವುಳ್ಳದ್ದೂ, ಚಮತ್ಕಾರವಾಗಿ ಮಾತನಾಡುವ ಸ್ವಭಾವವುಳ್ಳದ್ದೂ, ಕಿವಿಗಿಂಪಾಗಿ ಮಾತನಾಡುವಂತಹುದೂ ಆಗಿದೆ.

ಸರಸ್ವತಿಯ ಸಮೀಪದಲ್ಲಿದ್ದುದರಿಂದಲೇ, ಅವಳ ವರ್ಣ ಬುದ್ಧಿ ಚಾತುರ್ಯ (ವಾಕ್ಚಾತುರ್ಯ) ಇಂಪಾದ ಧ್ವನಿಗಳನ್ನು, ಹಂಸವು ಪಡೆದಿದೆಯೆಂಬ ವೃತ್ತಾಂತದಿಂದ ಗುರುವಿನಸಮೀಪದಲ್ಲಿದ್ದೇ ವಿದ್ಯೆ ಕಲಿತು ಸೂಕ್ಷ್ಮಬುದ್ಧಿಯುಳ್ಳ ಶಿಷ್ಯನವೃತ್ತಾಂತವು ತೋರಿಬರುವುದು.

ಟಿಪ್ಪಣಿ:—* ಇತರರ ಉತ್ಕೃಷ್ಟಗುಣಗಳನ್ನು ಸ್ವೀಕರಿಸತಕ್ಕವನು. ಶ್ರೇಷ್ಠವಾದ ಜ್ಞಾನವನ್ನುಳ್ಳವನು.
‡ ವಾಗ್ಮಿತ್ವವುಳ್ಳದ್ದೂ.

**ಪದ್ಯ ೭.**

**ಮಧ್ಯೇ ಕೇಚಿತ್ ವಯಮಿಹ ಸಖೇ ಕೇವಲಂ ಮಾನುಷಾಣಾಂ**
**ವ್ಯಕ್ತೋತ್ಕರ್ಷೋ ಮಹತಿ ಭುವನೇ ವ್ಯೋಮಗಾನಾಂಪತಿಸ್ತ್ವಂ ।**
**ಸ್ಥಾನೇ ದೂತ್ಯಂ ತದಪಿ ಭವತಸ್ಸಂಶ್ರಿತತ್ರಾಣಹೇತೋಃ**
**ವಿಶ್ವಸ್ರಷ್ಟಾ ವಿಧಿರಪಿ ಯತಸ್ಸಾರಥಿತ್ವೇನ ತಸ್ಥೌ ॥**



ಶ್ರೀರಾಮನು

ಹಂಸದಮೂಲಕ ಸಂದೇಶಕಳುಹಿಸುವುದು.

ಎಲೈ ಸ್ನೇಹಿತನೇ, ಈಲೋಕದಲ್ಲಿ ನಾವು ಶೌರ್ಯ ಧೈರ್ಯ ಸಾಹಸಾದಿಗಳು ಕೇವಲ ಕಡಿಮೆಯಾಗಿರುವ * ಮನುಷ್ಯಜಾತಿಯಲ್ಲಿ ಹುಟ್ಟಿರುವುದರಿಂದ ಅವರಮಧ್ಯದಲ್ಲೇ ಇದ್ದು ಅಪ್ರಸಿದ್ಧರಾಗಿದ್ದೇವೆ.

ನೀನಾದರೋ ಪುಣ್ಯಕಾರ್ಯಗಳಿಂದ ದೇವತ್ವವನ್ನು ಸಂಪಾದಿಸಿ ‡ ಆಕಾಶದಲ್ಲಿ ಸಂಚರಿಸುವ ಪಕ್ಷಿಗಳಿಗೆ ಒಡೆಯನಾಗಿದ್ದೀಯೆ. ವಿಶಾಲವಾದಲೋಕದಲ್ಲಿ ಚೆನ್ನಾಗಿಕಾಣುತ್ತಿರುವ ಮಹಿಮೆಯುಳ್ಳವನಾಗಿದ್ದೀಯೆ. ಈರೀತಿ ವ್ಯತ್ಯಾಸವಿದ್ದರೂ ಆಶ್ರಯಿಸಿದ ಗೆಳೆಯರ ರಕ್ಷಣೆಗೋಸುಗ ನಿನಗೆ ದೂತನಕೆಲಸವು ತಕ್ಕದ್ದಾಗಿದೆ.

ಬಹಳಹಿಂದಿನಕಾಲದಲ್ಲಿ ಆಶ್ರಿತರನ್ನು ಕಾಪಾಡಲು ಜಗತ್ತನ್ನು ಸೃಷ್ಟಿಸಿದ ಚತುರ್ಮುಖನೇ, ತ್ರಿಪುರಸಂಹಾರಕಾಲದಲ್ಲಿ ಶ್ರೀ ರುದ್ರದೇವನಿಗೆ ಸಾರಥ್ಯವನ್ನು † ಅಂಗೀಕರಿಸಿದನು.

ನಾವು ಈಲೋಕದಲ್ಲಿ ಕೇವಲ ಮನುಷ್ಯಜಾತಿಗೆ ಸೇರಿ ಅದರಲ್ಲೂ ಅಪ್ರಸಿದ್ಧರಾಗಿದ್ದೇವೆ. ನೀನಾದರೋ ಆಕಾಶದಲ್ಲಿ ಸಂಚರಿಸುವ ಪಕ್ಷಿಗಳಿಗೆ ಒಡೆಯನಾಗಿದ್ದು ಮಹಾಮಹಿಮನಾಗಿರುತ್ತೀಯೆ. ಹೀಗಿದ್ದರೂ ಆಶ್ರಿತರಪಾಲನೆಗೋಸ್ಕರ ದೌತ್ಯ ವಹಿಸುವುದು ಯುಕ್ತವೇ ಆಗಿದೆ.

ಟಿಪ್ಪಣಿ:—* ಅಪ್ರಸಿದ್ಧರ ಮಧ್ಯದಲ್ಲಿದ್ದು ಅಪ್ರಸಿದ್ಧರೇ ಆಗಿದ್ದೇವೆ.

‡ ಆಕಾಶದಲ್ಲಿ ಸಂಚರಿಸುವವರಿಗೆ ಪ್ರಭುವಾಗಿದ್ದೀಯೆ.

† ಅಂಗೀಕರಿಸಿ ಮೇಲುಪಙ್ಕ್ತಿಯಾಗಿದ್ದಾನಲ್ಲವೆ. ಶ್ರೀಕೃಷ್ಣನೂ ತನ್ನ ಭಕ್ತನಾದ ಅರ್ಜುನನಿಗೆ ಸಾರಥ್ಯಮಾಡಿದ್ದಾನೆ.

## ಪದ್ಯ ೮.

ಇಚ್ಛಾಮಾತ್ರಾತ್ ಜಗದಪರಥಾ ಸಂವಿಧಾತುಂ ಕ್ಷಮಾಣಾ
ಮಿಕ್ಷ್ವಾಕೂಣಾಂ ಪ್ರಕೃತಿಮಹತಾಮೀದೃಶೀಂ ಪ್ರೇಕ್ಷ್ಯ ವೇಳಾಂ।
ಲಕ್ಷ್ಮ್ಯೈಲಕ್ಷ್ಮ್ಯೈ ಜಲಧಿಪಯಸಾ ಲಬ್ಧಸಂಸ್ಥಾಂ ತ್ರಿಕೂಟೇ
ಲಂಕಾಂ ಗಂತುಂ ತವ ಸಮುಚಿತಂ ರಾಕ್ಷಸೀಂರಾಜಧಾನೀಂ ॥

ಇಷ್ಟಪಟ್ಟಮಾತ್ರದಿಂದಲೇ, ಈ ಪ್ರಪಂಚವನ್ನು ಬೇರೆಯಾಗಿ ಸಂಪೂರ್ಣವಾಗಿ ಬದಲಾಯಿಸಲು ಸಮರ್ಥರಾದ, ಸಹಜವಾಗಿಯೇ * ಮಹಾಮಹಿಮರಾದ ಇಕ್ಷ್ವಾಕುರಾಜರ, ಇಂತಹಕಷ್ಟತರವಾದ ಸಮಯವನ್ನು ಚೆನ್ನಾಗಿಯೋಚಿಸಿನೋಡು.

ಸಮುದ್ರದನೀರಿನಿಂದ ಕಂಡೂಕಾಣದಂತೆಯಿರುವ ತ್ರಿಕೂಟ ಪರ್ವತದಮೇಲೆ, ಲಂಕೆಯೆಂಬ ರಾವಣನರಾಜಧಾನಿಯು ಉತ್ತಮ ವಾದಸ್ಥಿತಿಯಲ್ಲಿ ನೆಲೆಗೊಂಡಿದೆ. ಅಲ್ಲಿಗೆಹೋಗುವುದಕ್ಕೆ ಪಕ್ಷಿಯಾದ ನೀನು ತಕ್ಕವನು ಆಗಿದ್ದೀಯೆ.

### ಪದ್ಯ ೯.

ಸ್ಥಾನೈರ್ದಿವ್ಯೈರುಪಚಿತಗುಣಾಂ ಚಂದನಾರಣ್ಯರಮ್ಯಾಂ
ಮುಕ್ತಾಸೂತಿಂ ಮಲಯಮರುತಾಂ ಮಾತರಂ ದಕ್ಷಿಣಾಶಾಂ ।
ಅಸ್ಮತ್ ಪ್ರೀತ್ಯೈ ಜನಕತನಯಾಜೀವಿತಾರ್ಥಂ ಚ ಗಚ್ಛ
ನ್ನೇಕಂ ರಕ್ಷಃಪದಮಿತಿ ಸಖೇ ದೋಷಲೇಶಂ ಸಹೇಥಾಃ ॥

ತಾನಾಗಿ ಉದ್ಭವಿಸಿದ ಶ್ರೀರಂಗಾದಿಕ್ಷೇತ್ರಗಳಿಂದ ಅಭಿವೃದ್ಧಿ ಹೊಂದಿದ, ಮನೋಹರವಾದ ಗುಣಗಳುಳ್ಳ, ಗಂಧದಮರದಕಾಡು ಗಳಿಂದ * ಆಕರ್ಷಕವಾಗಿರುವ, ಮುತ್ತುಗಳುಹುಟ್ಟುವಸ್ಥಳವಾದ ಮಲಯಪರ್ವತದ ಗಾಳಿ ಬೀಸಿಕೊಂಡುಬರುವ, ದಕ್ಷಿಣದಿಕ್ಕಿಗೆ, ನಮಗೆ ಪ್ರೀತಿಯನ್ನುಂಟುಮಾಡುವುದಕ್ಕೂ, ಸೀತೆಯ ಪ್ರಾಣರಕ್ಷಣೆ ಗೋಸುಗವೂ ಹೋಗಬೇಕಾಗಿದೆ. ಲಂಕೆಯು ರಾಕ್ಷಸರಿಗೆ ರಾಜ ಧಾನಿಯೆಂಬ ಈಯೊಂದೇ ಒಂದು ಸಣ್ಣದೋಷವನ್ನು ‡ ಸಹಿಸು.

ಟಿಪ್ಪಣಿ:—* (ದಕ್ಷಿಣದಿಕ್ಕಿನಿಂದ ಬೀಸುವಗಾಳಿಯಲ್ಲಿ ಶೈತ್ಯಸೌರಭ್ಯಮಾಂದ್ಯವೆಂಬ ಉತ್ತಮವಾದ ಮೂರುಗುಣಗಳಿವೆ.) * ರಮಣೀಯವಾಗಿರುವ.

‡ ಕ್ಷಮಿಸು.

## ಪದ್ಯ ೧೦.

ವಾಚಾಲಾನಾಮಿವ ಜಡಧಿಯಾಂ ಸತ್ಕವೌ ದೂರಯಾತೇ
ಕೈಲಾಸಾಯ ತ್ವಯಿ ಗತವತಿ ಕ್ಷೀಬತಾಮಾಶ್ರಿತಾನಾಂ ।
ಸಂಮೋದಸ್ತೇ ಪಥಿಪರಿಣಮೇಚ್ಚಂದ್ರಕೈರುಜ್ಜ್ರಿತಾನಾಂ
ಮೇಘಾಪಾಯೇ ವಿಪಿನಶಿಖಿನಾಂ ವೀಕ್ಷ್ಯ ವಾಚಂಯಮತ್ವಂ ॥

ಉತ್ತಮಕವಿಯು ಬಹುದೂರದೇಶಕ್ಕೆ ಹೊರಟುಹೋಗಿರಲು, ಆಗ ಸ್ಥಳದಲ್ಲಿನ ಮೂರ್ಖರಂತೆ ಉತ್ತಮಜಲಚರಪಕ್ಷಿಯಾದ ÷ ನೀನು ಕೈಲಾಸದ ಸಮೀಪದಲ್ಲಿರುವ ಮಾನಸಸರೋವರಕ್ಕೆ ಹೊರಟು ಹೋಗಲು ‡ ಮನಸ್ಸಿಗೆ ಬಂದಂತೆ ಹರಟುವ ಮೋಡಗಳೊಡನೆ ನವಿಲುಗಳು ಬಂದವು.

ವರ್ಷಋತುವಿನಿಂದ † ಕೊಬ್ಬಿಹೋಗಿರುವ ಇವುಗಳು ಆ ಕಾಲ ಕಳೆದುಹೋದಮೇಲೆ ತೆಪ್ಪಗಾಗುತ್ತವೆ. ಇದನ್ನು ನೀನು ಗಮನಿಸಿ ನೋಡುವುದರಿಂದ ನಿನ್ನ ಪ್ರಯಾಣಕಾಲದಲ್ಲಿ ಹೆಚ್ಚುಸಂತೋಷ ವುಂಟಾಗುವುದು.

ಶರತ್ಕಾಲದಲ್ಲಿ ಹಂಸಗಳು ನಮ್ಮ ಭರತಖಂಡದ ಜಲಾಶಯಗಳಲ್ಲಿ ವಾಸಿಸುತ್ತಿದ್ದು ವರ್ಷಾಕಾಲವೊದಲಾದರೆ ಮಾನಸಸರೋವರಕ್ಕೆ ಹೊರಟುಹೋಗುತ್ತವೆ.

ಮಳೆಗಾಲಬಂದರೆ ನವಿಲುಗಳಿಗೆ ಬಹಳ ಸಂತೋಷವಾಗುವುದು. ಆಗ ಅವುಗಳ ಪುಕ್ಕಗಳಲ್ಲಿ ಉತ್ತಮವಾದ ಗರಿಗಳು ಹುಟ್ಟಿ ನೋಡುವುದಕ್ಕೆ ಬಹು ಅಂದವಾಗಿರುತ್ತವೆ.

ತನ್ನ ರೆಕ್ಕೆಪುಕ್ಕಗಳನ್ನು ÷ ಪಸರಿಸಿಕೊಂಡು, "ಕೇಕಾ" ಎಂದು ಕೂಗುತ್ತ ಕುಣಿಯುತ್ತಿರುತ್ತವೆ. ವರ್ಷಾಕಾಲಮುಗಿದು ಶರತ್ಕಾಲ ಬಂದಿತೆಂದರೆ ಅವುಗಳಿಗೆ ಪುಕ್ಕದಗರಿಗಳು ಉದುರಿ ಬಣ್ಣಗೆಟ್ಟು

ಹಾಡದೆ ಕುಣಿಯದೇ ಮಂಕಾಗಿರುತ್ತವೆ. ಹಂಸವೇ, ನವಿಲುಗಳ ಈ ಸ್ಥಿತಿಯನ್ನು ನೋಡಿ ನಿನ್ನದಾರಿಯಲ್ಲಿ ನಿನಗೆ ಹೆಚ್ಚು ಸಂತೋಷವು ತಪ್ಪದೇ ಉಂಟಾಗುವುದು.

"ಕವಿ" ಶಬ್ದಕ್ಕೆ ಜಲಚರಪಕ್ಷಿ ಮತ್ತು $ ಕವಿಯೆಂದೂ ಅರ್ಥ. ಇಲ್ಲಿ ಸತ್ಕವಿಯೆಂದರೆ ಹಂಸಪಕ್ಷಿಯೆಂದೂ ಮಹಾಕವಿಯೆಂದೂ ಅರ್ಥವಾಗುವುದು. ಇಲ್ಲಿ ಮಹಾಕವಿಸ್ಥಾನದಲ್ಲಿರುವುದು ಹಂಸಪಕ್ಷಿ. ಕ್ಷುದ್ರಕವಿಸ್ಥಾನದಲ್ಲಿರುವುದು ನವಿಲು. ಶರತ್ಕಾಲವು ಹಂಸಗಳಿಗೆ ಅಭಿವೃದ್ಧಿಯಸಮಯ.

ಟಿಪ್ಪಣಿ:—* ಹಂಸವು.

‡ ಸುಮ್ಮನೆ ಅರ್ಭಟಿಸುವ.

† ತಮಗೆ ಸಮಾನರಿಲ್ಲವೆಂದು ತಿಳಿದಿರುವ. ಶರತ್ಕಾಲದಲ್ಲಿ ನವಿಲುಗರಿಗಳಿಂದ ಕಣ್ಣುಗಳುದುರಿಹೋಗುತ್ತವೆ. ಇಂಥ ನವಿಲುಗಳು ಕಾಡಿನಲ್ಲಿ "ಕೇಕಾ" ಧ್ವನಿಮಾಡದಿರುತ್ತವೆ. (ಮೌನವಾಗಿರುತ್ತವೆ.)

÷ ಕೆದರಿಕೊಂಡು.

$ ಗ್ರಂಥ ಬರೆಯುವವನು.

## ಪದ್ಯ ೧೧.

ಆರಕ್ತಾನಾಂ ನವಮಧುಶನೈರಾಪಿಬನ್ ಪದ್ಮಿನೀನಾಂ
ಕಾಲೋನ್ನಿದ್ರೇ ಕುವಲಯವನೇ ಘೂರ್ಣಮಾನಸ್ಸಲೀಲಂ |
ಸ್ವಿನ್ನೋ ದಾನೈರ್ವಿಪಿನಕರಿಣಾಂ ಸೌಮ್ಯ ಸೇವಿಷ್ಯತೇ ತ್ವಾಂ
ಆಮೋದಾನಾಮಹಮಹಮಿಕಾಮಾದಿಶನ್ ಗಂಧವಾಹಃ ||

ಶಾಂತಸ್ವಭಾವದವನೇ, ಗಂಧವಾಹನು ಸಂಪೂರ್ಣವಾಗಿ ಕೆಂಪಗೆಯಿರುವ ತಾವರೆಹೂಗಳ ಹೊಸದಾದ * ಜೇನನ್ನು ಮೆಲ್ಲಗೆ ‡ರುಚಿನೋಡುತ್ತಾ, ರಾತ್ರಿಯಲ್ಲಿ, ಅರಳಿದ ನೈದಿಲೇಹೂಗಳ ವನದಲ್ಲಿ ಮನೋಹರವಾಗಿ ಗುಂಡಗೆ ಸುತ್ತುತ್ತಾ ಇರುವನು.

ಉತ್ತಮವಾದ ಸುಗಂಧವನ್ನು ಲೇಪಿಸಿಕೊಂಡಿರುವವನು, ಮದ್ಯಪಾನದಿಂದ ಮತ್ತರಾದ † ಪದ್ಮಿನೀಜಾತಿಸ್ತ್ರೀಯರ ಅತ್ಯಂತ ಸಮೀಚೀನವಾದ ÷ ಬಿಂಬಾಧರಾಮೃತವನ್ನು ಮೆಲ್ಲಗೆ ಆಸ್ವಾದಿಸುತ್ತಾ, ರಾತ್ರಿಯಲ್ಲಿ ಇಂದೀವರಗಳ ವನದಲ್ಲಿ ಬಹಳ ಆಂದವಾಗಿ ಗುಂಡಗೆ ಸುತ್ತುತ್ತಾಯಿರುವನು.

ಇಂತಹ ಗಂಧವಾಹನು ಕಾಡಾನೆಗಳ ಮದೋದಕದಿಂದ $ ನೆನೆದು ಜನಗಳಿಗೆ ಹೆಚ್ಚುಹಿತಕರವಾದ ವಾಸನೆಯಿಂದ ಕೂಡಿ, "ನಾನುಮುಂದೆ ತಾನುಮುಂದೆ" ಯೆಂಬ ರೀತಿಯಲ್ಲಿ ನಿನ್ನನ್ನು ಉಪಚರಿಸುತ್ತಾನೆ.

ನೀನು ರಾತ್ರಿಯಹೊತ್ತು ಪ್ರಯಾಣಮಾಡಿದರೂ ನಿನಗೆ ಉಪಚರಿಸುವವರು ಇಲ್ಲದೇಹೋಗುವುದಿಲ್ಲ. ಎಂದರೆ:—ಶೈತ್ಯ ಸೌರಭ್ಯ ಮಾಂದ್ಯಗುಣಯುಕ್ತ ವಾಯುವಿನಿಂದ ಆಗಲೂ ಸೇವಿತನಾಗುವೆ.

ಟಿಪ್ಪಣಿ:—* ಬಂಡನ್ನು. ಮಧುವನ್ನು.
‡ ತೃಪ್ತಿಯಾಗುವವರೆಗೂ ಕುಡಿಯುತ್ತಾ.
† ಸುಂದರೀಮಣಿಯರ.
÷ ಮಧುವನ್ನು.
$ ಶೈತ್ಯಗುಣದಿಂದಕೂಡಿ. ಈ ವರ್ಣನೆಯಲ್ಲಿ ದಕ್ಷಿಣನಾಯಕನವೃತ್ತಾಂತವು ಸೂಚಿತವು. "ತುಲ್ಯೋಽನೇಕತ್ರದಕ್ಷಿಣಃ"

### ಪದ್ಯ ೧೨.

**ಪರ್ಯಾಪ್ತಂ ತೇ ಪವನಚಲಿತೈರಂಗರಾಗಂ ಪರಾಗೈಃ**
**ಸ್ಥಾನೇ ಕುರ್ಯುಸ್ಸಮುಸಮುದಯಾತ್ ಬಂಧವೋ ಬಂಧುಜೀವಾಃ |**
**ಯೇನಾಸ್ವೇಽಪ್ಯಸ್ಯಚಲತನಯಾಪಾದಲಾಕ್ಷಾನುಷಕ್ತಂ**
**ಚೂಡಾಚಂದ್ರಂ ಪುರವಿಜಯಿನಸ್ಸ್ವರ್ಣದೀಫೇನಪೂರ್ಣಂ ||**

ಸಮಾಸಕಾಲದಲ್ಲಿ * ಅರಳುವುದರಿಂದ ನಿನ್ನ ನೆಂಟರಂತಿರುವ ‡ ಕಣಿಗಿಲೇಹೂಗಿಡಗಳು, ತಮ್ಮ ತಮ್ಮ ಜಾಗದಲ್ಲಿದ್ದುಕೊಂಡು ಗಾಳಿಯಿಂದ ಅಲುಗಿ ಬೇರೆಯಾದ ತಮ್ಮ ಪುಷ್ಪಧೂಳಿಗಳಿಂದ, ದಾರಿಯಲ್ಲಿ ಹೋಗುತ್ತಿರುವ ನಿನಗೆ ಪರಿಪೂರ್ಣವಾದ † ಅನುಲೇಪನವನ್ನು ಮಾಡಿ ಉಪಚರಿಸುವುವು. ಪಾರ್ವತೀ ÷ ಪಾದಾನುಲಿಪ್ತವಾಗಿರುವ ಅರಗಿನರಸದಿಂದ ರಂಜಿತವಾದ ತ್ರಿಪುರಾರಿಯ ತಲೆಯಲ್ಲಿರುವ ಗಂಗೆಯನೊರೆಯಿಂದ ಪೂರ್ಣಮಂಡಲವಾಗಿರುವ, ಶಿವನತಲೆಗೆ ಆಭರಣವಾದ ಚಂದ್ರನನ್ನು, ನೀನು, ಮೇಲೆಹೇಳಿದ ಸುಗಂಧಾನುಲೇಪನದಿಂದ ಹೋಲುತ್ತೀಯೆ.

ಟಿಪ್ಪಣಿ:—* ನಿಮ್ಮಿಬ್ಬರಿಗೂ ಶರದೃತುವು ಹರ್ಷದಕಾಲವು.
‡ ದಾಸವಾಳದಗಿಡಗಳು.
† ಗಂಧಹಚ್ಚುವಿಕೆಯನ್ನು.
÷ ಪಾದಗಳಿಗೆ ಹಚ್ಚಿಕೊಂಡಿರುವ.

(ಪ್ರಣಯಕೋಪವನ್ನು ನಿವಾರಿಸುವುದಕ್ಕೋಸ್ಕರ ಮಾಡುವ ನಮಸ್ಕಾರದ ಸಂದರ್ಭಗಳಲ್ಲಿ ಶ್ರೀ ಚಂದ್ರಶೇಖರಸ್ವಾಮಿಯ ತಲೆಗೆ ಪಾರ್ವತಿಯ ಪಾದಸ್ಪರ್ಶವಾಗುವುದು. ಆಗ ತಲೆಯಮೇಲಿದ್ದ ಚಂದ್ರನಿಗೆ ಆ ಅಲಕ್ತಕರಸವು ಅಂಟಿಕೊಳ್ಳುವ ಸನ್ನಿವೇಶವಿರುವುದು.)

ಸಾಮಾನ್ಯವಾಗಿ, ಉತ್ತಮನಾಯಕನು ನಾಯಿಕಾಪ್ರಣಯ ಕೋಪನಿವಾರಣಕ್ಕೆ ಅವಳಪಾದಗಳಿಗೆ ಬೀಳುವುದು, ಸ್ವಭಾವ. ಅಂತೆಯೇ ಶ್ರೀ ಶಿವನು ಶಿವೆಯಪಾದಗಳಿಗೆ ಸಮಯವಿಶೇಷಗಳಲ್ಲಿ ‡ ಪ್ರಣಾಮಮಾಡಬಹುದು. ಇದರಿಂದ ಆ ಪಾದಗಳಲ್ಲಿದ್ದ ಅಲಕ್ತಕರಸದಿಂದ ಶಿವಶಿರೋಭೂಷಣವಾದ ಚಂದ್ರನು, ಕೆಂಬಣ್ಣವಾಗಿದ್ದಾನೆ. ಎಂದರೆ:— ಹಂಸದಲ್ಲೂ, ಚಂದ್ರನಲ್ಲೂ ಕೆಂಬಣ್ಣವಿದ್ದಂತಾಯಿತು.

ಶಿವನ ಚೂಡಾಚಂದ್ರನು ಕೆಲವುಕಲೆಗಳನ್ನುಮಾತ್ರ ಉಳ್ಳವನು, ಎಂದು ಪ್ರಸಿದ್ಧಿ. ಇವನಿಗೆ ಪೂರ್ಣತೆಯೆಂಬುದು ಶ್ರೀ ಚಂದ್ರಶೇಖರಸ್ವಾಮಿಯ ತಲೆಯಲ್ಲಿನ ಗಂಗೆಯ ನೊರೆಯಿಂದ.

ಎಂದರೆ:—ಹಂಸವೂ, ಚಂದ್ರನೂ, ಕೆಂಬಣ್ಣವುಳ್ಳವರು. ಹಂಸವು ಸಹಜವಾಗಿ ಪೂರ್ಣಚಂದ್ರನಂತಿರುವುದು. ಶಿರೋಭೂಷಣವಾದ ಚಂದ್ರನಾದರೋ ತಲೆಯ ಗಂಗೆಯನೊರೆಯಿಂದ ಪೂರ್ಣನು.

ಸ್ಸತಃ, ಪೂರ್ಣಚಂದ್ರನಂತಿರುವ ನೀನು, ಬಂಧುಜೀವಪುಷ್ಪಪರಾಗಗಳಿಂದ ಕೆಂಬಣ್ಣದವನಾಗುವೆ. ಆಗ ಶ್ರೀ ಶಿವನತಲೆಯಲ್ಲಿರುವ, ಪಾರ್ವತೀಪಾದಲಾಕ್ಷಾರಸದಿಂದ ಕೆಂಬಣ್ಣವನ್ನೂ, ಗಂಗೆಯನೊರೆಯಿಂದ ಪೂರ್ಣತೆಯನ್ನೂ ಪಡೆದ, ಚಂದ್ರನಂತಾಗುವೆ.

‡ ನಮಸ್ಕರಿಸುವುದು.

## ಪದ್ಯ ೧೩.

ಸೂಕ್ಷ್ಮಾಕಾರೈರ್ದಿನಕರಕರೈಃ ಕಲ್ಪಿತಾಂತಶ್ಶಲಾಕಾಃ
ಶಾರೋಪಾಂತಾಶ್ಶ್ರಿತಮುಖಧನುಃಶ್ರೇಣಿಚಿತ್ರಾಂಶುಕೇನ |
ಊಢಾಃ ಪಶ್ಚಾದುಚಿತಗತಿನಾ ವಾಯುನಾ ರಾಜಹಂಸ
ಚ್ಛತ್ರಾಯೇರನ್ನಭಸಿ ಭವತಶ್ಶಾರದಾವಾರಿವಾಹಾಃ ||

ರಾಜಹಂಸನೇ, ಶರತ್ಕಾಲದ ಮೋಡಗಳು ನಿನ್ನನ್ನು ಉಪಚರಿಸುತ್ತವೆ :—

ಅವು, ತೆಳುವಾಗಿಯೂ ಮುಚ್ಚಲು ಅನುಕೂಲವಾಗಿರುವಂತೆ ಸೂಕ್ಷ್ಮವಾಗಿರುವ ಸೂರ್ಯಕಿರಣಗಳೆಂಬ ಕಡ್ಡಿಗಳಿಂದಲೂ, ಕಾಮನಬಿಲ್ಲಿನ ಉಳಿದಿರುವಭಾಗವೆಂಬ ಬೇರೆಬೇರೆ ಬಣ್ಣದ ಬಟ್ಟೆಯಿಂದಲೂ, ತುದಿಯಲ್ಲಿ ಚಿತ್ರವಿಚಿತ್ರವಾದ ಜಾಲರಿಯಿಂದಲೂ ಕೂಡಿವೆ.

ಶ್ವೇತಚ್ಛತ್ರದಂತಿರುವ ಇಂತಹ ಶರತ್ಕಾಲದ ಬಿಳಿಯಮೋಡಗಳನ್ನು, ಹಿತಕರವಾಗಿ ಚಲಿಸುವ ಗಾಳಿಯು, ಮುಂದುಮುಂದಕ್ಕೆ ತಳ್ಳಿ, ಆಕಾಶಪ್ರಯಾಣಕಾಲದಲ್ಲಿ ನಿನಗೆ ಮರ್ಯಾದಾರ್ಥವಾದ ಬೆಳ್ಗೊಡೆಗಳನ್ನಾಗಿ ಮಾಡುತ್ತದೆ.

## ಪದ್ಯ ೧೪.

ದ್ರಕ್ಷ್ಯಸ್ಯೇವಂ ಪ್ರಿಯಸಖ ಸುಖಂ ಲಂಘಿತಾಧ್ವಾಸ
ಖೀಂ ತೇ ಸೀತಾಂ ಕ್ಷೇತ್ರೀಂ ಜನಕನೃಪತೇರುತ್ಥಿತಾಂ ಸೀರಕೃಷ್ಟೇಃ |
ಗೋಪಾಯಂತೀಂ ತನುಮಪಿ ನಿಜಾಂ ಯಾಕಥಂಚಿನ್ಮದರ್ಥಂ ಭೂ
ಮೌ ಲೋಕೇವಹತಿ ಮಹತೀಮೇಕಪತ್ನೀಸಮಾಖ್ಯಾಂ ||

ಪ್ರೀತಿಪಾತ್ರನಾದ ಸ್ನೇಹಿತನೆ, ಸುಖವಾಗಿ ಬೇಗ ದಾರಿಯನ್ನು ದಾಟು. ನಿನಗೆ ಸ್ನೇಹಿತಳಾದ, ಜನಕರಾಜನು ಯಜ್ಞಭೂಮಿಯನ್ನು ನೇಗಿಲಿಂದುಳುವಾಗ ಅಲ್ಲಿ * ತಾನಾಗಿಯೇ ಕಾಣಿಸಿಕೊಂಡ, ಸೀತೆಯನ್ನು ನೋಡುವೆ.

ಅವಳು, ತನ್ನ ದೇಹವನ್ನು ನನಗೋಸ್ಕರಲೇ ಬಹಳ ಕಷ್ಟಗಳನ್ನನುಭವಿಸಿ ರಕ್ಷಿಸಿಕೊಂಡಿರುತ್ತಾಳೆ. ಇದರಿಂದ ಭೂಲೋಕದಲ್ಲಿ ‡ ಪೂಜ್ಯಳಾಗಿರುತ್ತಾಳೆ. ಪತಿವ್ರತೆಯೆಂಬ ಉತ್ತಮವಾದ ಕೀರ್ತಿಯನ್ನು ಪಡೆದಿರುತ್ತಾಳೆ.

ಟಿಪ್ಪಣಿ:—* ಅಯೋನಿಜೆಯಾದ, ಭೂಮಿಜೆಯಾದ.
‡ ವಂದನೀಯಳಾಗಿರುತ್ತಾಳೆ.

**ಪದ್ಯ ೧೫.**

ಪ್ರಕ್ಷೀಣಾಂ ತ್ವದ್ವಿರಹಸಮಯೇ ಜಾತಹರ್ಷಾಮಿದಾನೀಂ
ಪ್ರತ್ಯಾಯಾಸ್ಯನ್ನನುನಯ ಶನೈಃ ಪದ್ಮಿನೀಂ ಸ್ವಾದುವಾಚಾ ।
ಸಾ ತೇ ತಂತ್ರೀಸ್ವನಸುಭಗಯಾ ಸ್ಯಾದಿತೀಹಾಭ್ಯನುಜ್ಞಾಂ
ಮನ್ಯೇ ಕುರ್ಯಾನ್ಮಧುಕರಗಿರಾ ಮೈಥಿಲೀಸೌಹೃದೇನ ॥

ನೀನು ಅಗಲಿದ್ದಾಗ ನಿನ್ನಪ್ರಿಯಳು ಆ ದುಃಖದಿಂದ ಹೆಚ್ಚು ಕೃಶಳಾಗಿದ್ದಳು. ಹಿಂದಿರುಗಿಬಂದಿರುವುದರಿಂದ ಈಗತಾನೇ *ಕಮಲಿನಿಯು ಹೆಚ್ಚು ಸಂತೋಷಪಡುತ್ತಿರುವಳು. ನೀನು, ಪುನಃ ಬಹಳ ಬೇಗ ಹಿಂದಿರುಗಿಬರುತ್ತೇನೆಂದು ಹಿತಕರವಾದ ವಾಕ್ಯಗಳಿಂದ ‡ ಮೆಲ್ಲಗೆ ಸಮಾಧಾನಪಡಿಸು. ಅನಂತರ † ಅವಳು ವೀಣೆಯ ಧ್ವನಿಯಂತೆ ಮಧುರವಾಗಿರುವ ತುಂಬಿಯಧ್ವನಿಯೆಂಬ ತನ್ನಮಾತಿನಿಂದ ಹಾಗೆಯೇ ಆಗಲೆಂದು ನಿನಗೆ ಈ ಸಂದೇಶವನ್ನು ತೆಗೆದುಕೊಂಡು

ಹೋಗುವ ಕೆಲಸಕ್ಕೆ ಸಮ್ಮತಿಸುತ್ತಾಳೆಂದು ಊಹಿಸುತ್ತೇನೆ. ಏಕೆಂದರೆ:—ಸೀತೆಯಲ್ಲಿ ಕಮಲಿನಿಗೆ ಹೆಚ್ಚು ಪ್ರೀತಿಯಿದೆ.

ಟಿಪ್ಪಣಿ:—* ತಾವರೇಬಳ್ಳಿಯು.
‡ ಮನಸೋಯುವಂತೆ.
† ಕಮಲಿನಿಯು, ಪದ್ಮಿನಿಯು. ಸೀತೆಯು ಲಕ್ಷ್ಮಿಯ ಅವತಾರವೇ ಆಗಿದ್ದಾಳೆ. ಲಕ್ಷ್ಮಿಯಾದರೋ ಪದ್ಮಾಸನೆ, ಪದ್ಮಪಾಣಿ, ಪದ್ಮವದನೆ. ಆದುದರಿಂದ ಕಮಲಿನಿಗೆ ಸೀತೆಯಲ್ಲಿ ಪ್ರೀತಿಯಿರುವುದು, ನ್ಯಾಯಸಮ್ಮತವಾಗಿದೆ.

## ಪದ್ಯ ೧೬.

ಸಾರ್ಧಂ ಕಾಂತೈಶ್ಶಬರಸುದೃಶಾಮದ್ರಿಕುಂಜೇಷು ರಾಗಾತ್
ಆಸೀನಾನಾಂ ಕ್ಷಣಮುಪಮಯೋಃ ದೃಶ್ಯಚಂದ್ರೋದಯಶ್ರೀಃ |
ಉಡ್ಡೀಯೇಥಾಸ್ಸರಸಿಜವನಾದ್ದಕ್ಷಿಣಾಶಾನುಸಾರೀ
ಪಶ್ಯನ್ ದೂರಾತ್ ಪ್ರಬಲಗರುತಾಂ ಪಕ್ಷಿಣಾಂ ದತ್ತವರ್ತ್ಮಾ ||

ಬೇಡರಜಾತಿಯ ರಮಣಿಯರು, ಹಗಲಲ್ಲಿ ತಮ್ಮ ಪ್ರಿಯರೊಡನೆ ಪರ್ವತಪ್ರದೇಶಗಳ ಲತಾಗೃಹಗಳಲ್ಲಿ ಅನುರಾಗವತಿಯರಾಗಿ ಕುಳಿತಿರುವರು. ಆಗ ಬಹುಸ್ವಲ್ಪಕಾಲಮಾತ್ರ ನೋಡಲು ಸಾಧ್ಯನಾದ * ಚಂದ್ರನಂತೆ ‡ ಕಾಂತಿವಂತನಾಗು. ಆಮೇಲೆ ದಕ್ಷಿಣ ದಿಕ್ಕಿಗೆ ಹೋಗು. ಆಗ ದೂರದಿಂದಲೇ ಚೆನ್ನಾಗಿನೋಡಿ, ಆಕಾಶದಲ್ಲಿ ಹಾರುತ್ತಿರುವ, ನಿನಗಿಂತ ಪ್ರಬಲವಾದ ಹಕ್ಕಿಗಳಿಗೆ ದಾರಿಯನ್ನು ಬಿಟ್ಟುಕೊಡು. ಈ ತಾವರೆಯ ವನದಿಂದ ಮೇಲಕ್ಕೆಹಾರಿ ಆಕಾಶಮಾರ್ಗದಲ್ಲಿ ಹೋಗು.

ಟಿಪ್ಪಣಿ:—* ಚಂದ್ರೋದಯದಂತೆ.
‡ ಕಾಣಿಸಿಕೋ, ದರ್ಶನಕೊಡು.

**ಪದ್ಯ ೧೭.**

ಅಂಗೀಕುರ್ವನ್ ಅಮೃತರುಚಿರಾಮುತ್ಪತಿಷ್ಣೋಸ್ಸಲೀಲಂ
ಛಾಯಾಮಂತಸ್ತವ ಮಣಿಮಯೋ ಮಾಲ್ಯವಾನೇಷಶೈಲಃ ।
ಶೋಭಾಂ ವಕ್ಷ್ಯತ್ಯಧಿಕಲಲಿತಾಂ ಶೋಭಮಾನಾಮತೀಂದೋಃ
ದೇವಸ್ಯಾದೇರುಪಜನಯುತೋ ಮಾನಸಾದಿಂದುಬಿಂಬಂ ॥

ಮಾಲ್ಯವಂತವೆಂದುಪ್ರಸಿದ್ಧವಾದ ಪರ್ವತವು * ಇಂದ್ರನೀಲ ಮಯವಾಗಿ ಹತ್ತಿರದಲ್ಲೇ ಇದೆಯಲ್ಲವೇ. ಮನೋಹರವಾಗಿ ಮೇಲಕ್ಕೆ ಹಾರಿಹೋಗುವ, ಚಂದ್ರನಿಗಿಂತ ಮೀರಿದ ಕಾಂತಿಯುಳ್ಳ, ನಿನ್ನ, ‡ ಅಮೃತದಂತೆ ಮನೋಹರವಾಗಿರುವ † ಪ್ರತಿಬಿಂಬವು, ಅದರ ಮಧ್ಯದಲ್ಲಿ ಬೀಳುತ್ತದೆ. ಆಗ ಅದು ÷ ಮನಸ್ಸಿನಿಂದ ಚಂದ್ರನನ್ನು ಸೃಷ್ಟಿಸುತ್ತಿರುವ ಜಗತ್ಕಾರಣನಾದ ಭಗವಂತನ ಅತ್ಯಂತರಮಣೀಯ ವಾಗಿರುವ ಜಾಜ್ವಲ್ಯಮಾನವಾದ ಕಾಂತಿಯನ್ನು ಪಡೆಯುವುದು.

ಟಿಪ್ಪಣಿ:—* ನವರತ್ನಗಳಲ್ಲಿ ಇದು ಒಂದು ಜಾತಿಯದು. ಕಪ್ಪಗೆ ಹೊಳೆಯುತ್ತಿರುವ ಬಣ್ಣವುಳ್ಳದ್ದು.

‡ ಅಮೃತದ ವರ್ಣವು ಬಿಳುಪೆಂದು ಪ್ರಸಿದ್ಧಿ.

† ನೆರಳು, ನೆಳಲು.

÷ ಬೆಟ್ಟವು ಕಪ್ಪಗೆಹೊಳೆಯುತ್ತಿದೆ. ಇವರಮೇಲೆ ಹಂಸದನೆರಳು ಬೆಳ್ಳಗೆ ಬೀಳುವುದನ್ನು ನೋಡಿದರೆ ಬಹು ಅಂದವಾಗಿ ಕಾಣುವುದು. ಭಗ ವಂತನು ನೀಲಮೇಘಶ್ಯಾಮನು, ಇವನ ಮನಸ್ಸಿನಿಂದ ಚಂದ್ರನು ಸೃಷ್ಟನಾಗುತ್ತಾನೆಂದು ಶ್ರುತಿಯು.

**ಪದ್ಯ ೧೮.**

ಮಾರ್ಗೌ ಸಮ್ಯಗ್ಜ್ಞಮ ಹನುಮತಾ ವರ್ಣಿತೌ ದ್ವೌ ತಯೋಸ್ತೇ
ಸಹ್ಯಾಸನ್ನೋಽಪ್ಯನಘ(ತಿ)ಸುಭಗಃ ಪಶ್ಚಿಮೋ ನಿತ್ಯವರ್ಷಃ ।
ಪ್ರಾಚೀನೇ ತು ಪ್ರತಿಜನಪದಂ ಸಂಹತಾವದ್ಭುತಾನಾಂ
ಮಗ್ನಾದೃಷ್ಟಿಃ ಕಥಮಪಿ ಸಖೇ ಮತ್ಕೃತೇ ತೇ ನಿವಾರ್ಯಾ ॥

ಹನುಮಂತನಿಂದ ನನಗೆ ಎರಡುದಾರಿಗಳು ಚೆನ್ನಾಗಿ ವಿಚಾರ
ಪೂರ್ವಕವಾಗಿ ಹೇಳಲ್ಪಟ್ಟಿವೆ.

ಆ ಪ್ರಸಿದ್ಧವಾದ ಪಶ್ಚಿಮಮಾರ್ಗವು ಬಹಳ ಹತ್ತಿರವಾಗಿದೆ
ಯಾದರೂ ಯಾವಾಗಲೂ ಮಳೆಹೊಯ್ಯುತ್ತಿರುವುದರಿಂದ, ನಿನಗೆ
ಹಿತಕರವಲ್ಲ.

ಪೂರ್ವದೇಶದ ದಾರಿಯಲ್ಲಾದರೋ ಪ್ರತಿಗ್ರಾಮ ಸಮೂ
ಹವೂ ವಿಚಿತ್ರವಸ್ತುಗಳ ಸಮುದಾಯದಿಂದ ಕೂಡಿದ್ದಾಗಿದೆ. ಅವ
ರಲ್ಲಿ ನೆಟ್ಟ * ನಿನ್ನ ದೃಷ್ಟಿಯು ನನಗಾಗಿ, ಮಿತ್ರನೇ, ಹೆಚ್ಚುಪ್ರಯತ್ನ
ದಿಂದ ‡ ಹಿಂದಕ್ಕೆ ಎಳೆದುಕೊಳ್ಳಬೇಕು.

ಟಿಪ್ಪಣಿ:—* ನಿನ್ನ ದೃಷ್ಟಿಯನ್ನು.
‡ ನಿನ್ನಿಂದ ಎಳೆದುಕೊಳ್ಳೋಣವಾಗಬೇಕು.

## ಪದ್ಯ ೧೯.

ಶ್ರುತ್ವಾ ಶಬ್ದಂ ಶ್ರವಣ (ಮಧುರಂ) ಸುಭಗಂ ತಾವಕಂ ಪಾಮರೀಣಾಂ
ಪ್ರತ್ಯಾಸನ್ನಾತ್ಸಪದಿಭವನಾತ್ಸಾದರಂ ನಿರ್ಗತಾನಾಂ |
ಅಭ್ರೂಭಂಗೇಽಪ್ಯಧಿಕಸುಭಗೈರ್ನಿಶ್ಚಿತಾಂಗಃ ಕಟಾಕ್ಷೈಃ
ದೇಶಾನೇತಾನ್ವನಗಿರಿನದೀಸಂವಿಭಕ್ತಾನ್ಪ್ರತೀಯಾಃ ||

ಕಿವಿಗಳಿಗೆ ಹಿತಕರವಾಗಿರುವ ನಿನ್ನ ಧ್ವನಿಯನ್ನು ಕೇಳಿ, ನೀನು
ಸಮೀಪಕ್ಕೆ ಬಂದಿದ್ದೀಯೋ, ಎಂಬ ಕಾರಣದಿಂದ ಆಸಕ್ತಿಯಿಂದ
ಕೂಡಿಕೊಂಡಿರುವ * ಅಜ್ಞತಮರಾದ ಸ್ತ್ರೀಯರು, ತತ್ ಕ್ಷಣವೇ
ಮನೆಯಿಂದ ಹೊರಕ್ಕೆ ಹೊರಟುಬಂದಿರುವರು. ಇವರಿಗೆ ‡ ಇತರ
ಸ್ತ್ರೀಯರಂತೆ ಹುಬ್ಬುಗಳನ್ನು † ತಿರುಗಿಸುವುದಕ್ಕೆ ಬರುವುದಿಲ್ಲ
ವಾದರೂ ಬಹಳ ರಮಣೀಯಗಳಾದ ಕಡೆಗಣ್ಣಿನ ನೋಟಗಳಿಂದ

ನಿನ್ನನ್ನು ಹಂಸವೆಂದು ತಿಳಿದುಕೊಳ್ಳುತ್ತಾರೆ. ಅದಾದಮೇಲೆ, ಕಾಡು ಬೆಟ್ಟ ನದಿಗಳಿಂದ ಬೇರೆಯಾಗಿರುವ ಈ ದೇಶಗಳನ್ನು ದಾಟಿಹೋಗು.

ಟಿಪ್ಪಣಿ:--* ಹಳ್ಳಿಗಳಲ್ಲಿಯೇ ವಾಸಿಸುತ್ತಿರುವ.
‡ ನಗರಗಳಲ್ಲೇ ಇರುತ್ತಿರುವ.
† ಹಾರಿಸುವುದಕ್ಕೆ.

## ಪದ್ಯ ೨೦.

ಇಕ್ಷುಚ್ಛಾಯೇ ಕಿಸಲಯಮಯಂ ತಲ್ಪಮಾತಸ್ಥುಷೀಣಾಂ
ಸಲ್ಲಾಪೈಸ್ತೈರ್ಮುದಿತಮನಸಾಂ ಶಾಲಿಸಂರಕ್ಷಿಕಾಣಾಂ ।
ಕರ್ಣಾಟಾಂಧ್ರವ್ಯತಿಕರವಶಾತ್ ಕರ್ಬುರೇ ಗೀತಿಭೇದೇ
ಮುಹ್ಯಂತೀನಾಂ ಮದನಕಲುಷಂ ಮೌಗ್ಧ್ಯಮಾಸ್ವಾದಯೇಥಾಃ ॥

ಎಲೈ ಹಂಸವೇ, ಕಬ್ಬಿನಪೈರಿನ ನೆರಳಿನಲ್ಲಿ * ಚಿಗುರುಗಳಿಂದ ಮಾಡಿದ ಹಾಸಿಗೆಗಳಲ್ಲಿ ಕುಳಿತುಕೊಂಡು, ಮನ್ಮಥವಿಕಾರದಿಂದ ‡ ಕದಡಿಹೋಗುತ್ತಿರುವ ಸುಂದರಿಯರು, ಕಿವಿಗಿಂಪಾಗಿರುವ, ಮನಸ್ಸನ್ನಾಕರ್ಷಿಸುವ ಪ್ರಶ್ನೋತ್ತರಗಳಿಂದ † ಪ್ರೀತಿಪೂರ್ಣ ಮನಸ್ಕರಾಗಿದ್ದಾರೆ. ಅವರು, ಕರ್ಣಾಟ ಆಂಧ್ರದೇಶಗಳಲ್ಲಿ ವ್ಯವಹಾರದಲ್ಲಿರುವ ಗೀತಾಲಾಪಗಳ ಪರಸ್ಪರ ಸಮ್ಮೇಳನದಿಂದ ಸೊಗಸುತ್ತಿರುವ ಹಾಡುಗಳಿಂದ, ಸಂಪೂರ್ಣಾನಂದವನ್ನು ಅನುಭವಿಸುತ್ತಾ, ಭತ್ತದ ಪೈರನ್ನು ತಿಂದು ಹಾಳುಮಾಡಲು ಬರುವ ಪಕ್ಷಿಗಳನ್ನು ಓಡಿಸುತ್ತಿರುವರು. ಇಂತಹ ರಮಣಿಯರ ಮುಗ್ಧಾವಸ್ಥೆಯನ್ನು ಚೆನ್ನಾಗಿ ನೋಡಿ ಸಂತೋಷಪಡು.

ಟಿಪ್ಪಣಿ:--* ಚಿಗುರುಗಳನ್ನು ಹಾಸಿ ಅದರಮೇಲೆ ಕುಳಿತುಕೊಂಡು.
‡ ಕಲಕಿ.
† ಅನುರಾಗ.

## ಪದ್ಯ ೨೧.

ವಿಷ್ಣೋರ್ವಾಸಾದವನಿವಹನಾತ್ ಬದ್ಧರತ್ನೈಶ್ಶಿಖೋಭಿಃ
ಶೇಷಸ್ಸಾಕ್ಷಾದಯಮಿತಿ ಜನೈಸ್ಸಮ್ಯಗುನ್ನೀಯಮಾನಃ |
ಅಭ್ರೈರ್ಯುಕ್ತೋऽಲಘುಭಿರಚಿರಾನ್ಮುಕ್ತನಿರ್ಮೋಕಕಲ್ಪೈಃ
ಅಗ್ರೇ ಭಾವೀ ತವನು ನಯನೇ ರಂಜಯನ್ನಂಜನಾದ್ರಿಃ ||

ಅದಾದಮೇಲೆ, ಭಗವಂತನು * ಅರ್ಚಾರೂಪನಾಗಿ ತನ್ನಲ್ಲಿ ನೆಲೆಸಿರುವುದರಿಂದಲೂ, ತಾನು ಭೂಮಿಯನ್ನು ಧರಿಸಿರುವುದರಿಂದಲೂ, ತನಗೆ ರತ್ನಮಯವಾದ ‡ ಶಿಖರಗಳಿರುವುದರಿಂದಲೂ, ಮುಂದೆ ಕಾಣುತ್ತಿರುವ ಗಿರಿಯು, † ಕಣ್ಣೆದುರಿಗೆ ಬಂದಿರುವ ಆದಿಶೇಷನೇ ಎಂದು ಸಜ್ಜನರು ಊಹಿಸುವಂತಿದೆ.

ಆಗತಾನೇ ಆದಿಶೇಷನು ÷ ಬಿಟ್ಟ $ ಪೊರೆಗಳಂತಿರುವ ಹಗುರವಾಗಿ ಬೆಳ್ಳಗಿರುವ ದೊಡ್ಡಮೋಡಗಳಿಂದ ಆವರಿಸಿಕೊಂಡಿರುವ ವೆಂಕಟಾಚಲವು, ⊥ ಕಣ್ಣುಗಳಿಗೆ ಸುಖವನ್ನುಂಟುಮಾಡುತ್ತಾ ಮುಂದೆ ಕಾಣುವುದು.

ಟಿಪ್ಪಣಿ:—* ವಿಗ್ರಹರೂಪದಲ್ಲಿ.
‡ ಕೋಡುಗಲ್ಲುಗಳು.
† ಪ್ರತ್ಯಕ್ಷವಾಗಿರುವ.
÷ ಬಿಡುತ್ತಿರುವ.
$ ಪೊರೆಗಳೆಂಬಂತಿರುವ.
⊥ ಕಣ್ಣುಗಳಿಗೆ ಹಬ್ಬವನ್ನುಂಟುಮಾಡುತ್ತಿರುವುದು.

ತಿರುಪತಿಯ ಬೆಟ್ಟದಲ್ಲಿ ದೇವರು ಶ್ರೀನಿವಾಸರೂಪದಲ್ಲಿ ನೆಲೆಗೊಂಡಿದ್ದಾನೆ. ಇದು * ಭೂಮಿಗೆ ಆಧಾರವಾಗಿದೆ. ಇದಕ್ಕೆ ರತ್ನಮಯವಾದ ಅನೇಕ ಶಿಖರಗಳಿವೆ. ಇದನ್ನು ನೋಡಿದರೆ ಶೇಷನೇ ಬಂದಂತೆ ಕಾಣುತ್ತಿರುವುದು.

ಆದಿಶೇಷನು ಭಗವಂತನಿಗೆ ಹಾಸಿಗೆಯಾಗಿದ್ದಾನೆ. ಮತ್ತು ಭೂಮಿಯನ್ನು ಧರಿಸಿದ್ದಾನೆ. ಇವನಿಗೆ ಸಾವಿರತಲೆಗಳುಂಟು. ಪ್ರತಿಯೊಂದರಲ್ಲೂ ‡ ಜೀವರತ್ನಗಳು ಇವೆ. ನೋಡುವವರ ಕಣ್ಣಿಗೆ ಮೇಲೆಹೇಳಿದ ಬೆಟ್ಟವು ಆದಿಶೇಷನಂತೆ ಕಾಣುತ್ತಿದೆ.

ಅಷ್ಟೇ ಅಲ್ಲದೆ ಈ ಬೆಟ್ಟದಮೇಲೆ ಹಗುರವಾದ ಬಿಳಿಯಮೋಡಗಳು ಆವರಿಸಿಕೊಂಡಿವೆ. ಆದುದರಿಂದ ಆದಿಶೇಷನು ತನ್ನ ಮೈಯಿಂದ ಬಿಟ್ಟ ಪೊರೆಗಳಂತೆ ಕಾಣುತ್ತಿವೆ.

* ಸಂಸ್ಕೃತಭಾಷೆಯಲ್ಲಿ ಬೆಟ್ಟಕ್ಕೆ ಭೂಧರವೆಂದು ಹೆಸರು.

‡ ನಾಗಮಣಿಗಳು.

## ಪದ್ಯ ೨೨

ತತ್ರಾರೂಢೈರ್ಮಹತಿ ಮನುಜೈಸ್ಸ್ವರ್ಗಿಭಿಶ್ಚಾವತೀರ್ಣೈಃ
ಸತ್ವೋನ್ಮೇಷಾತ್ ವ್ಯಪಗತಮಿಥಸ್ತಾರತಮ್ಯಾದಿಭೇದೈಃ ।
ಸಾಧಾರಣ್ಯಾತ್ ಫಲಪರಿಣತೇಸ್ಸಂಘಶೋ ಬಧ್ಯಮಾನಾಂ
ಶಕ್ತ್ಯಾ ಕಾಮಂ ಮಧುವಿಜಯಿನಸ್ತ್ವಂ ಚ ಕುರ್ಯಾಸ್ಸಪರ್ಯಾಂ ॥

ಮಹಾಮಹಿಮೆಯುಳ್ಳ ಅಂಜನಗಿರಿಗೆ ಭೂಲೋಕದಿಂದ ಮನುಷ್ಯರೂ, ಸ್ವರ್ಗಲೋಕದಿಂದ ದೇವತೆಗಳೂ, ಬರುವರು. ಅಲ್ಲಿಗೆ ಬಂದಾಗ ಪ್ರತಿಯೊಬ್ಬರಿಗೂ ರಜಸ್ತಮೋಗುಣಗಳು ಕಡಿಮೆಯಾಗಿ ಸತ್ವಗುಣವು ಹೆಚ್ಚುತ್ತದೆ. ಇದರಿಂದ ಮನುಷ್ಯ, ದೇವತೆಗಳೆಂಬ ಭೇದಭಾವಗಳು ಕಡಿಮೆಯಾಗುತ್ತವೆ. ಭಕ್ತಿಯಿಂದ ಪೂಜೆಮಾಡಿದವರಿಗೆಲ್ಲಾ ಸಮಾನಫಲಬರುವುದರಿಂದ ಮನುಷ್ಯರೂ ದೇವತೆಗಳೂ ಒಟ್ಟಾಗಿಯೇ ಆ ಭಗವಂತನನ್ನು ಪೂಜಿಸುವರು.

ಬಹಳ ಹಿಂದಿನಕಾಲದಲ್ಲಿ ಲೋಕ *ಕಂಟಕರಾದ ಮಧುಕೈಟಭರನ್ನು ಕೊಂದು ಲೋಕವನ್ನು ರಕ್ಷಿಸಿದ ದೇವರನ್ನು, ನೀನೂ, ಶಕ್ತಿಯಿದ್ದಷ್ಟು ಇಷ್ಟಬಂದಂತೆ ತಪ್ಪದೆ ಪೂಜಿಸು.

ಟಿಪ್ಪಣಿ:—* ಹಿಂಸಕರಾದ.

## ಪದ್ಯ ೨೩.

ಸ್ತೋಕೋನ್ಮಗ್ನಸ್ಫುರಿತಪುಲಿನಾಂ ತ್ವನ್ನಿವಾಸೇಚ್ಛಯೇವ
ದ್ರಕ್ಷ್ಯಸ್ಯಾರಾತ್ ಕನಕಮುಖರೀಂ ದಕ್ಷಿಣಾಮಂಜನಾದ್ರೇಃ ।
ಆಸನ್ನಾನಾಂ ವನವಿಟಪಿನಾಂ ವೀಚಿಹಸ್ತೈಃ ಪ್ರಸೂನಾ
ನ್ಯರ್ಚಾಹೇತೋರುಪಹರತಿ ಯಾ ನೂನಮರ್ಧೇಂದುಮೌಳೇಃ ॥

ಆ ಗಿರಿಯ ಹತ್ತಿರದಲ್ಲೇ ದಕ್ಷಿಣದಕಡೆ ಹರಿಯುತ್ತಿರುವ ಕನಕ ಮುಖರಿಯೆಂಬ ನದಿಯನ್ನು ನೋಡುವೆ. ಅದು, ನಿನಗೆ ವಿಶ್ರಾಂತಿಗೆ ಅನುಕೂಲವನ್ನು ಮಾಡಿಕೊಡಬೇಕೆಂಬ ಅಪೇಕ್ಷೆಯಿಂದಲೋ ಎಂಬಂತೆ * ಸ್ವಲ್ಪ ಮುಳುಗಿದ ಪ್ರಕಾಶಮಾನವಾದ, ಮರಳುದಿಣ್ಣೆ ಗಳಿಂದ ಕೂಡಿದೆ.

ಆ ನದಿಯು, ಹತ್ತಿರದಲ್ಲಿರುವ ಕಾಡಿನ ಮರಗಳ ಹೂಗಳನ್ನು ಮಹಾಭಾಗವತನಾದ ‡ ರುದ್ರದೇವನು ಮಾಡುವ ಭಗವತ್ಪೂಜೆ ಗೋಸ್ಕರ, † ಅಲೆಗಳೆಂಬ ಕೈಗಳಿಂದ ಕಾಣಿಕೆಯಾಗಿ ಕೊಡುತ್ತದೆ ಯೆಂಬುದು ನಿಜವಾಗಿದೆಯಲ್ಲವೆ.

ಟಿಪ್ಪಣಿ:—* ಸ್ವಲ್ಪ ಮೇಲಕ್ಕೆದ್ದು ಕಾಣುವ.
‡ ಭಕ್ತರು ಮಾಡುವ ಮಹಾ ರುದ್ರದೇವರ ಪೂಜೆಗೋಸ್ಕರ.
† ತೆರೆಗೈಗಳಿಂದ.

### ಪದ್ಯ ೨೪.

ನಿರ್ವಿಶ್ಯೈನಾಂ ನಿಭೃತಮನಭಿವ್ಯಕ್ತಮಂಜುಪ್ರಣಾದೋ
ಮಂದಾಧೂತಃ ಪುಲಿನಪವನೈರ್ವಂಜುಲಾಮೋದಗರ್ಭೈಃ |
ಅವ್ಯಾಸಂಗಸ್ಸಪದಿ ಪದವೀಂ ಸಂಶ್ರಯಾನ್ಯೈರಲಂಘ್ಯೋಂ(ಘ್ಯಾಂ)
ಬಂದೀಕುರ್ಯುಸ್ತಟವಸತಯೋ ಮಾಭವನ್ತಂ ಕಿರಾತಾಃ ||

ಆ ನದಿಯನ್ನು ರಹಸ್ಯವಾಗಿ * ಉಪಭೋಗಿಸು:—ವಂಜುಳ ಪುಷ್ಪಗಳ ವಾಸನೆಯಿಂದಕೂಡಿರುವ, ನೀರಿನಿಂದ ನೆನೆದ ಮರಳಿನ ಮೇಲೆ ಮೆಲ್ಲಗೆಬೀಸುವ ಗಾಳಿಯಿಂದ ಸೇವಿತನಾಗುತ್ತೀಯೆ. ಅಲ್ಲಿ ನೀನು ಹೆಚ್ಚು ಹೊತ್ತು ನಿಲ್ಲಬೇಡ. ನೀನು ಅವ್ಯಕ್ತ ಮಧುರವಾಗಿ ಕೂಗತಕ್ಕವನಾದರೂ ಅಲ್ಲಿ ಸದ್ದುಮಾಡಬಾರದು. ತತ್ಕ್ಷಣವೇ, ಇತರರಿಂದ ದಾಟಲಸಾಧ್ಯವಾದ ಆ ದಾರಿಯನ್ನು ಬಹಳ ಜಾಗರೂ ಕತೆಯಿಂದ ‡ ಪರೀಕ್ಷಿಸುತ್ತಾ ಪ್ರಯಾಣಮಾಡು. ಅದರ ತೀರದಲ್ಲಿ

ವಾಸಿಸುವ ಬೇಡರು, ಆಕಾಶದಲ್ಲಿ ಸಂಚರಿಸುತ್ತಿರುವ ನಿನ್ನನ್ನು ಹಿಡಿದು ಸೆರೆಹಾಕದಿರಲಿ.

ಟಿಪ್ಪಣಿ:—* ಆ ನದಿಯಲ್ಲಿ ಸದ್ದಿಲ್ಲವೆ ವಿಶ್ರಮಿಸಿಕೋ, ಸುಧಾರಿಸಿಕೋ.
‡ ಚೆನ್ನಾಗಿ ನೋಡುತ್ತಾ.
† ನಿನಗೆ ಎಲ್ಲಾ ಭಾಗಗಳಲ್ಲೂ ಶುಭವಾಗಲಿ.

**ಪದ್ಯ ೨೫.**

ತುಂಡೀರಾಖ್ಯಂ ತದನು ಮಹಿತಂ ಮಂಡಲಂ ವೀಕ್ಷಮಾಣಃ
ಕ್ಷೇತ್ರಂ ಯಾಯಾಃ ಕ್ಷಪಿತದುರಿತಂ ತತ್ರ ಸತ್ಯವ್ರತಾಖ್ಯಂ ।
ಪತ್ಯೌ ರೋಷಾತ್ಸಲಿಲವಪುಷೋ ಯತ್ರ ವಾಗ್ದೇವತಾಯಾಃ
ಸೇತುರ್ಜಜ್ಞೇ ಸಕಲಜಗತಾಮೇಕಸೇತುಸ್ಸದೇವಃ ॥

ಅದಾದಮೇಲೆ, ಪುಣ್ಯಪ್ರದವಾದ ತುಂಡೀರದೇಶವನ್ನು ನೋಡು. ಅಲ್ಲಿನ ಪಾಪನಾಶಕವಾದ ಸತ್ಯವ್ರತಕ್ಷೇತ್ರಕ್ಕೆ ಹೋಗು.

ಅಲ್ಲೇ, ಲೋಕದ ಎಲ್ಲಾ ಪ್ರಾಣಿಗಳಿಗೂ ಮುಖ್ಯವಾದ ಸೇತುವಿನಂತೆ ರಕ್ಷಕನಾಗಿರುವ ಜಗದೀಶ್ವರನು, ತನ್ನ ಗಂಡನಾದ ಚತುರ್ಮುಖಬ್ರಹ್ಮನಮೇಲೆ ಕೋಪಿಸಿಕೊಂಡು ನದಿಯ ರೂಪವನ್ನು ಧರಿಸಿದ ಶಾರದೆಗೆ, * ಅಣೆಕಟ್ಟಿನರೂಪದಲ್ಲಿ ಕಾಣಿಸಿಕೊಂಡನು.

(ಬಹಳ ಹಿಂದಿನಕಾಲದಲ್ಲಿ ಚತುರ್ಮುಖನು, ಭಗವಂತನನ್ನು ಒಲಿಸಿಕೊಳ್ಳುವುದಕ್ಕಾಗಿ ಯಜ್ಞಮಾಡಲು ಪ್ರಾರಂಭಿಸಿದನು. ಅದಕ್ಕೆ ತಡೆಮಾಡಲು ಶಾರದೆಯು ‡ ನದಿಯರೂಪದಲ್ಲಿ ಬಂದಳು. ಆಗ ಜಗದೀಶ್ವರನು ವರದರಾಜನರೂಪದಲ್ಲಿ ಕಾಣಿಸಿಕೊಂಡು ಬ್ರಹ್ಮನ ಯಜ್ಞಕ್ಕೆ ಸರಸ್ವತಿಯಿಂದಾದ ತೊಂದರೆಯನ್ನು ತಪ್ಪಿಸಿ ಯಜ್ಞಪೂರೈಸಲು ಸಹಾಯಮಾಡಿದನು.)

ಟಿಪ್ಪಣಿ:—* ಸೇತು. ತಡೆಯರೂಪದಲ್ಲಿ.
‡ ವೇಗವತೀ.

**ಪದ್ಯ ೨೬.**

ನಾನಾರತ್ನೈರುಪಚಿತಗುಣಾಂ ನಿತ್ಯಸಂಗೀತನಾದಾಂ
ಭೂದೇವ್ಯಾಸ್ಸ್ಯುಚಿತವಿಭವಂ ಭೂಷಣಂ ತತ್ರ ಕಾಂಚೀಂ |
ಯಸ್ಯಾಂ ನಿತ್ಯಂ ನಿಹಿತನಯನೋ ಹಸ್ತಿಶೈಲಾಧಿವಾಸೀ
ದ್ವಂದ್ವಾತೀತಸ್ಸಖಲು ಪುರುಷೋ ದೃಶ್ಯತೇ ಸತ್ಯಕಾಮಃ ||

ಆಯಾ * ಜಾತಿಗಳಲ್ಲಿ ಶ್ರೇಷ್ಠವಾದ ವಸ್ತುಗಳಿಂದ ಏಳಿಗೆ ಹೊಂದಿದ, ರಮಣೀಯತೆ ಸಮೃದ್ಧಿಗಳೆಂಬ ಗುಣಗಳುಳ್ಳ, ಎಲ್ಲಾ ಕಾಲದಲ್ಲೂ ‡ ಸಂಗೀತನಾದವುಳ್ಳ, ಭೂದೇವಿಗೆ (ಯು) ತಕ್ಕ ವೈಭವ ಪೂರ್ಣ ಆಭರಣವಾದ ಕಾಂಚಿಯೆಂಬ ಪಟ್ಟಣವನ್ನು ಅಲ್ಲಿ ನೋಡುವೆ.

ಒಂಬತ್ತು ವಿಧವಾದ ರತ್ನದಜಾತಿಗಳಲ್ಲಿ ಒಂದೊಂದರಲ್ಲೂ, ಶ್ರೇಷ್ಠವಾದ ಅನೇಕರತ್ನಗಳಿಂದ ಹೆಚ್ಚಾಗಿ ಕಣ್ಗೊಳಿಸುತ್ತಿರುವ, ಉತ್ತಮವಾದ ಚಿನ್ನದದಾರಗಳಿಂದ † ಪೋಣಿಸಲ್ಪಟ್ಟ, ಎಲ್ಲಕಾಲಗಳಲ್ಲೂ ಇರುವ ನೃತ್ತಗೀತವಾದ್ಯಗಳೆಂಬ ÷ ಮೇಳದ ಹಾಡಿಕೆಯುಳ್ಳ, ರತ್ನಗರ್ಭೆ ಭೂದೇವಿಯ ಯೋಗ್ಯವಾದ ವೈಭವದ ಡಾಬನ್ನೂ ಅಥವಾ ಒಡ್ಯಾಣವನ್ನೂ ನೋಡುವೆ.

ಟಿಪ್ಪಣಿ:—* ಗುಂಪುಗಳಲ್ಲಿ.
‡ ಬಾಯಹಾಡಿಕೆಯುಳ್ಳ.
† ಚಿನ್ನದ ಸಲಿಗೆಗಳಿಂದಾದ ಕಾಂಚಿಯೆಂಬ ಆಭರಣವು ಮಧ್ಯೇ ಮಧ್ಯೇ ಹೊಂದಿಕೆಯಾಗುವಂತೆ ನವರತ್ನಗಳಿಂದ ಪೋಣಿಸಲ್ಪಟ್ಟಿದೆ.
÷ ಕಾಂಚಿಗೆ ಕಟ್ಟಿರುವ ಚಿನ್ನದಗೆಜ್ಜೆಯ ಸದ್ದುಗಳುಳ್ಳ ಅಥವಾ ಗಂಟೆಗಳ ಸದ್ದುಗಳುಳ್ಳ.

ಹಸಿವುಬಾಯಾರಿಕೆ, ಶೋಕಮೋಹ, ಮುಪ್ಪುಸಾವು, ಒಳ್ಳೆಯಕೆಲಸ ಕೆಟ್ಟಕೆಲಸ, ಈ ದ್ವಂದ್ವಗಳಿಂದ * ದೂರನಾಗಿರುವ, ‡ ಶಾಶ್ವತಗಳಾದ ಕಲ್ಯಾಣಗುಣಗಳುಳ್ಳ ಮಹಾಮಹಿಮನಾದ ಶ್ರೀ ನಾರಾಯಣನು, ಹಸ್ತಿಗಿರಿಯಲ್ಲಿ ನೆಲೆಗೊಂಡು, † ಕಾಂಚಿಯೆಂಬ ಆಭರಣದಲ್ಲಿ ಯಾವಾಗಲೂ ಏಕಾಗ್ರತೆಯಿಂದ ÷ ನೆಟ್ಟಕಣ್ಣುಳ್ಳವನಾಗಿ ಅರ್ಚಾರೂಪದಿಂದ $ ಜನಗಳಿಂದ ದರ್ಶನಮಾಡಲ್ಪಡುತ್ತಾನೆಯಲ್ಲವೆ.

* ಬಿಟ್ಟಿರುವ. ಇದರಿಂದ ಅಖಿಲಹೇಯಪ್ರತ್ಯನೀಕತ್ವವು ಸೂಚಿತವು.
‡ ಅನಂತ ಕಲ್ಯಾಣಗುಣಗಳುಳ್ಳ.
† ಕಾಂಚೀನಗರಿಯಲ್ಲಿ.
÷ ಕಾಂಚಿಯನ್ನು ನಿತ್ಯವೂ ಕಡೆಗಣ್ಣಿಂದ ನೋಡುತ್ತಾ.
$ ಜನಗಳು ದರ್ಶನಮಾಡಲು ಅನುಗ್ರಹಮಾಡಿದ್ದಾನೆಯಲ್ಲವೇ.

ಭಗವಂತನ ಅನುಗ್ರಹವನ್ನು ಪಡೆಯಬೇಕೆಂಬ ಆಶೆಯುಳ್ಳವನು ಕಾಂಚೀ ನಗರದಲ್ಲೇ ವಾಸಿಸುವನು. ಸಂಸಾರದಲ್ಲಿ ಉಂಟಾಗುವ ಪುಣ್ಯಾಪುಣ್ಯಗಳ ಫಲಗಳನ್ನು ಬಿಡುವನು, ಮತ್ತು *ಅಮೃತತ್ವವನ್ನು ಅಪೇಕ್ಷಿಸುತ್ತ ಲೋಕಗಳಲ್ಲಿ ಸರ್ವೋತ್ಕೃಷ್ಟನಾಗಿ ಪ್ರಸಿದ್ಧನಾಗುವನು.

ಇಂತಹ ಪುರುಷನು, ‡ಕಾಂಚಿಯೆಂಬ ಆಭರಣದಲ್ಲಿ ನೆಟ್ಟ ಕಣ್ಣುಳ್ಳವನಾಗಿ ಯಾವಾಗಲೂ ಅದನ್ನು ವರ್ಣಿಸುವುದರಲ್ಲೇ ಆಸಕ್ತಿಯುಳ್ಳವನಾದುದರಿಂದಲೇ ಶಾಶ್ವತ ವಿಷಯಾಭಿಲಾಷೆಯುಳ್ಳವನಾಗಿ ಎಲ್ಲರಿಂದಲೂ ನೋಡಲ್ಪಡುತ್ತಾನೆಯಲ್ಲವೇ.

ಸಂಸಾರದ ಎಲ್ಲ ಸಂಬಂಧವನ್ನೂ ಬಿಟ್ಟ ಯೋಗೀಶ್ವರನೂ ಆ ಕಾಂಚಿಯನ್ನು ನೋಡುತ್ತ ನಿತ್ಯಕಾಮುಕನಾಗಿ ಜನಗಳಿಂದ ದರ್ಶನಮಾಡಲ್ಪಡುತ್ತಾನೆ. ಆ ಕಾಂಚೀ ಪುರಿಯ ಸೌಂದರ್ಯವನ್ನು ಎಷ್ಟೆಂದು ವರ್ಣಿಸಿದರೂ ತೀರದು.

* ಮೋಕ್ಷಾಪೇಕ್ಷಿಯಾಗಿ.
‡ ಕಾಂಚೀನಗರದಲ್ಲಿ. ಇದರಲ್ಲಿ ಮನೋಹರವಾದ ಎರಡು ವರ್ಣನೆಗಳಿವೆ:-
(1) ಕಾಂಚೀನಗರಕ್ಕೂ, (2) ಕಾಂಚಿಯೆಂಬ ಆಭರಣಕ್ಕೂ ಸಂಬಂಧಿಸಿದುದು.

## ಪದ್ಯ ೨೭.

ತಾಮಾಸೀದನ್ ಪ್ರಣಮ ನಗರೀಂ ಭಕ್ತಿನಮ್ರೇಣ ಮೂರ್ಧ್ನಾ
ಜಾತಾಮಾದೌ ಕೃತಯುಗಮುಖೇ ಧಾತುರಿಚ್ಛಾವಶೇನ ।
ಯದ್ವೀಥೀನಾಂ ಕರಿಗಿರಿಪತೇರ್ವಾಹವೇಗಾವಧೂತಾನ್
ಧನ್ಯಾನ್ ರೇಣೂಂಸ್ತ್ರಿದಶಪತಯೋ ಧಾರಯಂತ್ಯುತ್ತಮಾಂಗೈಃ ॥

ಕೃತಯುಗದ ಆದಿಭಾಗದಲ್ಲಿ ಚತುರ್ಮುಖಬ್ರಹ್ಮನ ಸಂಕಲ್ಪ ದಿಂದಲೇ * ಹುಟ್ಟಿದ, ಮೇಲೆ ಹೇಳಿದ ನಗರಕ್ಕೆ ಹೋಗು.

ಆಮೇಲೆ ಸಾತ್ವಿಕವಾದ ಭಕ್ತಿಯಿಂದ ದೇವರಿಗೆ ತಲೆಬಾಗಿಸಿ ನಮಸ್ಕರಿಸು. ಚತುರ್ಮುಖಬ್ರಹ್ಮನೇ ಮೊದಲಾದ ದೇವತೆಗಳು ವೈಶಾಖಮಾಸದ ಗರುಡೋತ್ಸವಕಾಲದಲ್ಲಿ ವರದರಾಜಸ್ವಾಮಿಯ ವಾಹನನಾದ ಗರುತ್ಮಂತನವೇಗದಿಂದ ‡ ಮೇಲಕ್ಕೆ ಎದ್ದ ಪುಣ್ಯಕರಗಳಾದ ಹಸ್ತಿಶೈಲದ ಬೀದಿಗಳ ಧೂಳಿಗಳನ್ನು ತಲೆಗಳಲ್ಲಿ ಧರಿಸಿಕೊಳ್ಳುತ್ತಾರೆ.

ಟಿಪ್ಪಣಿ:—* ಸ್ಪಷ್ಟವಾದ.
‡ ಮೇಲಕ್ಕೆ ಎಬ್ಬಿಸಲ್ಪಟ್ಟ.

### ಪದ್ಯ ೨೮.

ಮಂದಾಧೂತಾತ್ ತದನು ಮಹಿತೋ ನಿಸ್ಸೃತಶ್ಚೂತಷಂಡಾತ್
ಪಾರ್ಶ್ವೇ ತಸ್ಯಾಃ ಪಶುಪತಿಶಿರಶ್ಚಂದ್ರನೀಹಾರವಾಹೀ ।
ದೂರಾತ್ ಪ್ರಾಪ್ತಂ ಪ್ರಿಯಸಖಮಿವ ತ್ವಾ ಮುಪೈಷ್ಯತ್ಯವಶ್ಯಂ
ಕಂಪಾಪಾಥಃ ಕಮಲವನಿಕಾಕಾಮುಕೋ ಗಂಧವಾಹಃ ॥

ಆಮೇಲೆ, ಆ ನಗರಿಯ ಪಕ್ಕದಲ್ಲಿ, ಮೆಲ್ಲಗೆ ಅಲುಗಿಸುತ್ತಿರುವ ಮಾವಿನ * ಮರಗಳ ಗುಂಪುಗಳಿಂದ ಹೊರಟುಬಂದ, ಅಲ್ಲಿ ನೆಲೆಗೊಂಡ ಏಕಾಮ್ರೇಶ್ವರಸ್ವಾಮಿಯ ತಲೆಯಲ್ಲಿರುವ ಚಂದ್ರನ ತಂಪನ್ನು ಪಡೆದು, ಏಳುಭಾಗವಾಗಿ ಹರಿಯುವ, ವೇಗವತೀ ಎಂಬ ನದಿ ಕಂಪೆಯುಸೇರಿನ ‡ ಪದ್ಮವನದ ಸಂಬಂಧವುಳ್ಳ, ಈರೀತಿ ಮಾಂದ್ಯ ಶೈತ್ಯ ಸೌರಭ್ಯಗಳಿಂದ ಕೂಡಿ ಯಾವಾಗಲೂ ಎಲ್ಲರಿಂದಲೂ ಶ್ಲಾಘಿತನಾದ ಗಂಧವಾಹನು, ಬಹುದೂರದಿಂದ ಬಂದ ನಿನ್ನನ್ನು ಪ್ರೀತಿಪಾತ್ರ ಸ್ನೇಹಿತನಂತೆ † ತಪ್ಪದೇ ಸಮೀಪಕ್ಕೆ ಬಂದು ಗೌರವಿಸುತ್ತಾನೆ.

ಈ ಪದ್ಯದಲ್ಲಿ ವರ್ಣಿತನಾದ ಗಂಧವಾಹನಲ್ಲಿ, ಸಿಹಿ ಮಾವಿನ ತೋಪಿನಿಂದ ಹೊರಟು ಶ್ರೀ ಶಿವನತಲೆಯಲ್ಲಿರುವ ಚಂದ್ರನ ತಂಪನ್ನು

ಪಡೆದು ಕಂಪಾನದಿಯ ಕಮಲವನದ ಕಂಪನ್ನು ವಹಿಸಿರುವ ಸರ್ವ ಶ್ಲಾಘನೀಯನಾದವನು ಎಂದು ಹೇಳುವ ವಾಯುವಿನ ವಿಶೇಷಣ ಗಳಿಂದ ಕ್ರಮವಾಗಿ ಈ ಅರ್ಥವೂ ತೋರಿಬರುತ್ತದೆ.

ದೂರದಿಂದಬಂದ ÷ ಪ್ರೀತಿಪಾತ್ರನಾದ ಸ್ನೇಹಿತನಿಗೆ, ಚೆನ್ನಾಗಿ ಆದರಿಸಬೇಕೆಂಬ ಆಶೆಯಿಂದ ತನ್ನ ಮನೆಯಿಂದ ಅವನನ್ನು ಇದಿರು ಗೊಳ್ಳಲು ಹೋದ, ಪತ್ನೀಸಮೇತನಾಗಿ ಎಲ್ಲರಿಂದಲೂ ಮರ್ಯಾ ದಿತನಾದ ಗೃಹಸ್ಥನ ವೃತ್ತಾಂತವು ತೋರಿಬರುತ್ತದೆ.

ಟಿಪ್ಪಣಿ:—* ತೋಪು.

‡ ಪದ್ಮವನದ ವಾಸನೆಯಿಂದ ಕೂಡಿರುವ ವಾಯುವಿಗೆ ಕಾಮುಕರಬ್ಬ ವನ್ನು ಉಪಯೋಗಿಸಿರುವುದರಿಂದ ಪದ್ಮವನದಲ್ಲಿ ಉತ್ತಮನಾಯಿಕಾತ್ವವು ಕಂಡುಬರುವುದು.

† ನಿಯಮದಿಂದ.

÷ ಆಪ್ತಮಿತ್ರ.

## ಪದ್ಯ ೨೯.

ವರ್ಣಸ್ತೋಮೈರಿವ ಪರಿಣತಾ ಸಪ್ತಭೇದೈರ್ವಹೌಘೈಃ
ಮಾನ್ಯಾ ಮಧ್ಯೇ ನಗರಮಭಿತಸ್ಸೇವಿತಾ ದೇವತಾಭಿಃ ।
ಸ್ವಚ್ಛಸ್ವಾದುಪ್ರಸರಸುಭಗಾ ಸ್ವಾಮಿನೀ ವಃ ಕವೀನಾಂ
ವೇಗಾಸಂಜ್ಞಾಂ ವಹತಿ ಮಹತೀಂ ವಲ್ಲಭಾ ಪದ್ಮಯೋನೇಃ ॥

ಆ ಪಟ್ಟಣದ ಮಧ್ಯಭಾಗದಲ್ಲಿ ಒಂದು ನದಿಯು ಹರಿಯು ತ್ತಿದೆ :—

ಅದು, ನೀರುಹಕ್ಕಿಗಳಿಗೂ ಕಾವ್ಯಕರ್ತೃಗಳಿಗೂ ಪೂಜ್ಯವಾಗಿ ಏಳುಭಾಗವಾಗಿ ವರ್ಣಗಳ ಗುಂಪಿನಂತೆ ಪ್ರವಹಿಸುತ್ತಿದೆ.

ಚತುರ್ಮುಖನಪತ್ನಿ ಸರಸ್ವತಿಯೇ ನದಿಯರೂಪದಲ್ಲಿ ಹರಿಯು ತ್ತಾಳೆ. ಇದರ ಎರಡುತೀರಗಳಲ್ಲೂ ಅರ್ಚಾರೂಪದ ದೇವತೆಗಳ

ಮಂದಿರಗಳು ನೆಲೆಗೊಂಡಿವೆ. ಅವುಗಳಿಂದಲೂ ಈ ನದಿಗೆ ಗೌರವ ಬಂದಿದೆ.

ಇದರ ನೀರು ನಿರ್ಮಲವಾಗಿಯೂ ರುಚಿಕರವಾಗಿಯೂ ಇದೆ. ಇದಕ್ಕೆ ವೇಗವತಿಯೆಂಬ ಪಾವನವಾದ ಹೆಸರುಬಂದಿದೆ.

ಟಿಪ್ಪಣಿ:—ಬ್ರಹ್ಮನಪತ್ನಿಯಾದ ಸರಸ್ವತೀದೇವಿಯು, ನದೀರೂಪದಿಂದ ಬಂದುದರಿಂದ ನೀರುಹಕ್ಕಿಗಳಾದ ನಿಮ್ಮಗಳಿಗೂ, (ಹಂಸ ಮೊದಲಾದ ಹಕ್ಕಿಗಳಿಗೂ) ಸರಸ್ವತೀದೇವಿಯು ಅವತಾರವಾಗಿರುವುದರಿಂದ ಗ್ರಂಥ ಬರೆಯತಕ್ಕವರಿಗೂ ಮುಖ್ಯಸ್ಥಳು. (ಪ್ರಭುವು) ಎಂದರೆ:—ವಿದ್ಯೆಗೆಲ್ಲಾ ಅಭಿಮಾನದೇವತೆಯಾಗಿರುವುದರಿಂದ, ಅದನ್ನು ಕಷ್ಟಪಟ್ಟು ಕಲಿತವರಿಗೂ ಅವಳೇ ದೇವತೆ.

"ಅ"ಕಾರಮೊದಲುಗೊಂಡು "ಅಂ ಅಃ" ಪರ್ಯಂತವಾಗಿ ಇರುವ ಅಕ್ಷರಗಳು ಒಂದುಗುಂಪು. "ಕ" ವರ್ಗಮೊದಲಾಗಿ "ಪ" ವರ್ಗವನ್ನೇ ಕೊನೆಯಾಗುಳ್ಳ ಐದು ವರ್ಗಗಳು ಐದುಗುಂಪು. "ಯ"ಕಾರಾದಿ "ಳ"ಕಾರ ಪರ್ಯಂತವಾದುದು ಮಗುದೊಂದು. ಸರಿಗಮಪದನಿ=ಸಪ್ತಸ್ವರಗಳು (ಸಂಗೀತದ್ದು). ಸರಸ್ವತೀನದಿಯು ಏಳುಭಾಗವಾಗಿ ಅಲ್ಲಿ (ಕಾಂಚಿಯಲ್ಲಿ) ಹರಿಯುವಳು. ಅವುಗಳ ಹೆಸರು (1) ಶುಕ್ತಿಕಾ, (2) ಕನಕಾ, (3) ಸೃಪ್ರಾ, (4) ಕಂಪಾ, (5) ಪೇಯಾ, (6) ಮಂಜುಲಾ, (7) ಚಂಡವೇಗಾ. ಇವುಗಳ ಮೂಲರೂಪಕ್ಕೆ ವೇಗವತಿಯೆಂದು ಹೆಸರು. ಎಂದರೆ:—ಸರಸ್ವತಿಯಾಗಿದ್ದಾಗ ಅಕ್ಷರಗಳ ಗುಂಪೆಂಬ ಏಳುಭೇದಗಳುಳ್ಳವಳು (ಅಂಗಗಳು.) ಹಾಗೆಯೇ ನದೀರೂಪ ಧರಿಸಿದಾಗಲೂ ಏಳುಪ್ರವಾಹಗಳಿಂದ ಕೂಡಿದವಳು.

## ಪದ್ಯ ೩೦.

ತೀರ್ಥೇ ಪುಂಸಾಂ ಶಮಿತಕಲುಷೇ ತತ್ರ ಸಾರಸ್ವತಾಖ್ಯೇ
ಸ್ನಾತ್ವಾ ಸಾರ್ಧಂ ಮುನಿಭಿರನಘೈಸ್ಸವ್ಯಗುಲ್ಲಾಸಿತಾಂಗಃ |
ವಿಶ್ವಂ ಚಿತ್ತೇ ವಿಗತರಜಸಿ ವ್ಯಂಜಯಂತೀಮಶೇಷಂ
ವಕ್ಷ್ಯಸ್ಯಂತರ್ಬಹಿರಪಿ ಪರಾಂ ಶುದ್ಧಿಮಕ್ಷೇಪಣೀಯಾಂ ||

ಆ ನದಿಯಲ್ಲಿ ಸ್ನಾನಮಾಡಿದವರಿಗೆ ಪಾಪಪರಿಹಾರವಾಗುವುದು. ಸಾರಸ್ವತವೆಂಬ ಪುಣ್ಯಕ್ಷೇತ್ರದಲ್ಲಿ ನಿರ್ದೋಷರಾದ ಋಷಿಗಳೊಡನೆ ಸ್ನಾನಮಾಡುವುದರಿಂದ ಅವಯವಗಳಲ್ಲಿ ನಿನಗೆ ‡ ಹೆಚ್ಚು ಉಲ್ಲಾಸವಾಗುವುದು.

ನಿನ್ನ ಮನಸ್ಸಿನ ರಜೋಗುಣ ತಮೋಗುಣಗಳು ಬಿಟ್ಟುಹೋಗು ವುವು. ಇದರಿಂದ ಎಲ್ಲಜಗತ್ತುಗಳನ್ನೂ ಕಾಣುವಂತೆ ಮಾಡುವ, ಸರ್ವೋತ್ಕೃಷ್ಟವಾದ, ಬೇರೆಯಾವ ಕಾರಣದಿಂದಲೂ ಪಡೆಯಲು ಅಸಾಧ್ಯವಾದ, ಪರಿಶುದ್ಧತೆಯನ್ನು ಒಳಗೂ ಹೊರಗೂ ಪಡೆಯುವೆ.

ಟಿಪ್ಪಣಿ:—‡ ಋಷಿಗಳಿಗೆ ಸಮನಾಗುವೆ.

## ಪದ್ಯ ೩೧.

**ತಸ್ಯಾಸ್ತೀರೇ ಸರಸಿಜಭುವಸ್ಸೌಮ್ಯ ವೈತಾನವೇದಿಃ**
**ದಿವ್ಯಂ ಕುರ್ವನ್ ದ್ರವಿಡವಿಷಯಂ ದೃಶ್ಯತೇ ಹಸ್ತಿಶೈಲಃ |**
**ಯಸ್ಯೋಪಾನ್ತೇ ಕೃತವಸತಯೋ ಯಾಪಯಿತ್ವಾ ಶರೀರಂ**
**ವರ್ತಿಷ್ಯನ್ತೇ ವಿತಮಸಿ ಪದೇ ವಾಸುದೇವಸ್ಯ ಧನ್ಯಾಃ ||**

ಮನೋಹರವಾದ ದರ್ಶನವುಳ್ಳವನೇ, ಅವರ ಉತ್ತರತೀರದಲ್ಲಿ ಬ್ರಹ್ಮನ ಯಜ್ಞವೇದಿಕೆಯಾದ ಕರಿಗಿರಿಯು ದ್ರಾವಿಡದೇಶವನ್ನು ಸ್ವರ್ಗಕ್ಕೆ ಸಮನನ್ನಾಗಿ * ಮಾಡುವುದು. ಇದು ನಿನಗೂ ಎಲ್ಲರಿಗೂ ದರ್ಶನಮಾಡಲು ಯೋಗ್ಯವಾಗಿದೆ. ಇದರ ಸಮೀಪದಲ್ಲೇ ವಾಸಿಸುತ್ತಾ ಶರೀರವನ್ನು ಬಿಡುವವರು ರಜಸ್ತಮೋಗುಣಗಳಿಂದ ‡ ಬಿಟ್ಟಿರುವ † ಸರ್ವಾಂತರ್ಯಾಮಿಯಾಗಿಯೂ, ಸರ್ವಾಧಾರನಾಗಿಯೂ, ಪರಮಾತ್ಮನಾಗಿಯೂ ಇರುವ ÷ ಶ್ರೀ ನಾರಾಯಣನ ಸ್ಥಾನದಲ್ಲಿ ವಾಸಮಾಡುವರು.

ಟಿಪ್ಪಣಿ:—* ಮಾಡುತ್ತದೆ.
‡ ಶುದ್ಧ ಸತ್ವಮಯವಾದ.
† ಎಲ್ಲವಸ್ತುಗಳ ಒಳಗೂ ಇದ್ದುಕೊಂಡು ಅವುಗಳನ್ನು ನಡೆಯಿಸತಕ್ಕವನು.
÷ ವೈಕುಂಠಲೋಕದಲ್ಲಿ. ಯಜ್ಞವೇದಿಕೆಯಾದ ಕರಿಗಿರಿಯು=ಯಾಗಭೂಮಿಯಾದ ಹಸ್ತಿಗಿರಿಯು. ಕಾಂಚೀನಗರವು.

**ಪದ್ಯ ೩೨.**

ಸಂಚಿನ್ವಾನಾ ತರುಣತುಲಸೀಧಾಮಭಿಸ್ಸ್ವಾಮಭಿಖ್ಯಾಂ
ತಸ್ಯಾಂ ವೇದ್ಯಾಮನುವಿದಧತೀಂ ಶ್ಯಾಮಲಂ ಹವ್ಯವಾಹಂ |
ಭೋಗೈಶ್ವರ್ಯಪ್ರಿಯಸಹಚರೈಃ ಕಾಽಪಿ ಲಕ್ಷ್ಮೀಕಟಾಕ್ಷೈಃ
ಭೂಯಶ್ಶ್ಯಾಮಾ ಭುವನಜನನೀ ದೇವತಾ ಸನ್ನಿಧತ್ತೇ ||

ಹಿಂದೆ ಹೇಳಿದ ಹಸ್ತಿಗಿರಿಯೆಂಬ ಉತ್ತರವೇದಿಯಲ್ಲಿ, ಎಳೆಯ ತುಳಸಿಯ * ಮಾಲೆಗಳಿಂದ ಸಹಜವಾದ ‡ ಕಾಂತಿಯನ್ನು ಹೆಚ್ಚಿಸುತ್ತಿರುವುದರಿಂದಲೇ ಕಪ್ಪಾದ ಅಗ್ನಿಯಂತಿರುವ, ಜಗತ್ತನ್ನು ಸೃಷ್ಟಿಸುವುದು ಮೊದಲಾದ ಲೀಲಾನುಭವ, ಎಲ್ಲಲೋಕಗಳನ್ನೂ ತನ್ನ ಅಧೀನದಲ್ಲಿ ಇಟ್ಟುಕೊಳ್ಳುವ ಸಾಮರ್ಥ್ಯ, ಆ ಎರಡು ವಿಷಯಗಳಲ್ಲಿ ಹೆಚ್ಚು † ಸಹಕಾರಿಗಳಾದ, ಲಕ್ಷ್ಮೀದೇವಿಯ ಕಡೆಗಣ್ಣಿನ ನೋಟಗಳಿಂದ ಹೆಚ್ಚು ಶ್ಯಾಮಲವರ್ಣವಾಗಿರುವ, ಲೋಕಗಳನ್ನು ಸೃಷ್ಟಿಸುವ ಮಹಾಮಹಿಮೆಯುಳ್ಳ ವರದರಾಜನು ನೆಲೆಗೊಂಡಿದ್ದಾನೆ.

ಟಿಪ್ಪಣಿ:—* ದಂಡೆಗಳಿಂದ.

‡ ಥಾಳಥಳ್ಯವನ್ನು. ಹೊಳಪನ್ನು, ಕಪ್ಪಾದ ಕಾಂತಿಯನ್ನು.

† ಒಂದಕ್ಕೊಂದು ತಕ್ಕಂತೆ ಹೊಂದಿಕೊಂಡಿರುವ. ಭೋಗಾವಸ್ಥೆಯಲ್ಲಿ ಪ್ರಿಯಗಳಾದ, ಐಶ್ವರ್ಯಾವಸ್ಥೆಯಲ್ಲಿ ಸಹಚರಗಳಾದ:—ಭೋಗವೆಂದರೆ ಶುದ್ಧಸತ್ವ ವಿಭೂತಿಯನ್ನು ಅನುಭವಿಸುವುದರಿಂದಾಗುವ ರಸ (ಆನಂದ.)

ಐಶ್ವರ್ಯವೆಂದರೆ:—ಲೀಲಾವಿಭೂತಿಯನ್ನು ನಿಯಮಿಸುವುದು. ಲೋಕಗಳನ್ನು ತನ್ನ ಅಧೀನದಲ್ಲಿಟ್ಟುಕೊಂಡಿರುವಿಕೆ.

ಎಲ್ಲ ಅವಸ್ಥೆಗಳಲ್ಲೂ (ಸ್ಥಿತಿ) ಜತೆಯಲ್ಲೇ ಇರುವ.

**ಪದ್ಯ ೩೩.**

ಲಕ್ಷ್ಮೀವಿದ್ಯುಲ್ಲಲಿತವಪುಷಂ ತತ್ರ ಕಾರುಣ್ಯಪೂರ್ಣಂ
ಮಾಭೈಷೀಸ್ತ್ವಂ ಮರಕತಶಿಲಾಮೇಚಕಂ ವೀಕ್ಷ್ಯ ಮೇಘಂ |
ಶುದ್ಧೈರ್ನಿತ್ಯಂ ಪರಿಚಿತಪದಸ್ತ್ವಾದೃಶೈರ್ದೇವಹಂಸೈಃ
ಹಂಸೀಭೂತಸ್ಸಖಲು ಭವತಾಮನ್ವವಾಯಾಗ್ರಜನ್ಮಾ ||

ಆವೇದಿಕೆಯಲ್ಲಿ, ಲಕ್ಷ್ಮಿಯೆಂಬ ಮಿಂಚಿನಿಂದ ಮನೋಹರ ವಾದ ದೇಹವುಳ್ಳ, ಗರುಡಪಚ್ಚೆಯಮಣಿಯಂತೆ ಕಣ್ಗೊಳಿಸುವ, ದಯಾರಸಪೂರ್ಣವಾದ, * ಮೋಡದಂತಿರುವ ವರದರಾಜನನ್ನು ದರ್ಶನಮಾಡು.

ಅವನನ್ನು ಮೇಘವೆಂದು ತಿಳಿದು ಹೆದರಬೇಡ. ಅದು, ನಿನ್ನಂತೆ ಬೆಳ್ಳಗಿರುವ ದೇವಲೋಕದ ಹಂಸಗಳಿಂದ ಯಾವಾಗಲೂ ಪಾದಸೇವೆಯನ್ನು ಮಾಡಿಸಿಕೊಳ್ಳುತ್ತಲಿರುವುದು. ಹಿಂದೆ ಅದು, † ವೇದೋದ್ಧರಣಕ್ಕೋಸ್ಕರ ಹಂಸಾವತಾರಮಾಡಿದುದರಿಂದ ಹಂಸಗಳಾದ ನಿಮ್ಮ ವಂಶದಲ್ಲಿ ಮೊದಲು ಹುಟ್ಟಿ, ನಿಮಗೆ ಮೂಲಪುರುಷನಾಗಿದೆಯಲ್ಲವೆ.

ಟಿಪ್ಪಣಿ:—* ನೀಲಮೇಘಶ್ಯಾಮ.

‡ ದೇವಶ್ರೇಷ್ಠರಿಂದ, ಮುಕ್ತಜೀವಾತ್ಮಗಳಿಂದ, ನಿತ್ಯಸೂರಿಗಳಿಂದ.

† ವೇದಗಳ ರಕ್ಷಣೆಗೋಸ್ಕರ.

### ಪದ್ಯ ೩೪.

ಸಾರಾಸ್ವಾದೀ ಸವನಹವಿಷಾಂ ಸ್ವಾಮಿನಸ್ತೇ ಸ ದೇವಃ
ಶುದ್ಧಂ ಚಕ್ಷುಶ್ಶ್ರುತಿಪರಿಷದಾಂ ಚಕ್ಷುಷಾಂ ಭಾಗಧೇಯಂ |
ಅಂಗೀಕುರ್ಯಾತ್ ವಿನತಮಮೃತಾಸಾರಸಂವಾದಿಭಿಸ್ತ್ವಾಂ
ಆವಿರ್ಮೋದೈರಭಿಮತವರಸ್ಥೂಲಲಕ್ಷ್ಯೈಃ ಕಟಾಕ್ಷೈಃ ||

ನಿನಗೆ ಪ್ರಭುವಾದ, ಬ್ರಹ್ಮನಯಜ್ಞದ ಹವಿಸ್ಸುಗಳಲ್ಲಿ ಶ್ರೇಷ್ಠವಾದ ಭಾಗಗಳನ್ನು ರುಚಿನೋಡಿಯೂ ಇರುವ, ವೇದಸಮುದಾಯಕ್ಕೆ ನಿರ್ದೋಷಗಳಾದ ಕಣ್ಣುಗಳಾಗಿಯೂ, ಎಲ್ಲಪ್ರಾಣಿಗಳ ಕಣ್ಣುಗಳಿಗೂ ಭಾಗ್ಯಸ್ವರೂಪವಾಗಿಯೂ ಇರುವ ಆ ವರದರಾಜಸ್ವಾಮಿಯು ಅಲ್ಲಿದ್ದಾನೆ.

ಆವನು ನಮಸ್ಕರಿಸಿದ ನಿನ್ನಲ್ಲಿ * ದಯೆಯಿಟ್ಟು, ಅಮೃತಧಾರೆ ಗಳಂತಿರುವ, ನಿನಗೆ ಬೇಕಾದವರಗಳನ್ನು ಕೊಡುವುದರಲ್ಲಿ ಅಗ್ರಗಣ್ಯ ವಾಗಿಯೂ ಇರುವ, ‡ ಕಡೆಗಣ್ಣಿನ ನೋಟಗಳಿಂದ ನಿನ್ನನ್ನು † ಆಶ್ರಿತ ನೆಂಬ ಭಾವದಿಂದ ತಪ್ಪದೆ ಸ್ವೀಕರಿಸುತ್ತಾನೆ.

ಟಿಪ್ಪಣಿ:—* ದಯಮಾಡಿ.
‡ ಕಟಾಕ್ಷಗಳಿಂದ.
† ಭಕ್ತನೆಂಬ.

## ಪದ್ಯ ೩೫.

ಮಧ್ವಾಸ(ಸಿ)ಕ್ತಂ ಸರಸಿಜಮಿವ ಸ್ವಿನ್ನಮಾಲಂಬಮಾನೋ
ದೇವ್ಯಾಹಸ್ತಂ ತದಿತರಕರನ್ಯಸ್ತಲೀಲಾರವಿಂದಃ ।
ದೇವಶ್ಶ್ರೀಮಾನ್ ಸ ಯದಿ ವಿಹರೇತ್ ಸ್ವೈರಮಾರಾಮಭೂಮೌ
ವ್ಯಕ್ತೋ ವಾಲವ್ಯಜನವಪುಷಾ ವೀಜಯೇಸ್ತಂ ತ್ವಮೇವ ॥

ಆ ಕಾಂತಿಮಂತನಾದ ಲಕ್ಷ್ಮೀವರದರಾಜನು, ಬೆವರಿರುವುದ ರಿಂದ ಮಕರಂದದಿಂದಕೂಡಿದ ಕಮಲದಂತಿರುವ ಲಕ್ಷ್ಮೀದೇವಿಯ ಬಲಗೈಯನ್ನು, (ತನ್ನ) ಎಡಗೈಯಿಂದ ಹಿಡಿದುಕೊಳ್ಳುವನು. ಮತ್ತೊಂದುಕೈಯಲ್ಲಿ ವಿನೋದಕ್ಕಾಗಿ ಕಮಲವನ್ನು ಹಿಡಿದು ಕೊಳ್ಳುವನು.

ಆಮೇಲೆ, ಅವನು ಉದ್ಯಾನವನದಲ್ಲಿ ಇಷ್ಟಬಂದಂತೆ * ವಿಹರಿ ಸಿದರೆ ಆಗ ನೀನೇ ‡ ಚಾಮರರೂಪವಾದ ವೇಷದಿಂದ ಕಾಣಿಸಿ ಕೊಂಡು ಆ ಪ್ರಭುವನ್ನು ಬೀಸಿ ಉಪಚರಿಸು.

ಟಿಪ್ಪಣಿ:—* ವಿಹರಿಸುವ ಪಕ್ಷದಲ್ಲಿ.
‡ ಆಗ ನಿನ್ನ ರೆಕ್ಕೆಗಳೆಂಬ ಬೀಸಣಿಗೆಯಿಂದ.

## ಪದ್ಯ ೩೬.

ಜಾತಪ್ರೀತಿರ್ಜನಪದಮಥೋ ಮಧ್ಯಮಂ ಲಂಘಯಿತ್ವಾ
ದೂರಾಲ್ಲಕ್ಷ್ಯಕ್ರಮುಕನಿವಹಶ್ಯಾಮಲಾನ್ ಯಾಹಿ ಚೋಳಾನ್ |
ಪ್ರತ್ಯುದ್ಗಚ್ಛನ್ ಮಕರವಲನಸ್ತಂಭಿತೈಸ್ಸಹ್ಯಜಾಯಾಃ
ಸ್ರೋತೋಭೇದೈರ್ವಿವಿಧಗತಿಭಿಸ್ಸಂವಿಭಕ್ತಾವಕಾಶಾನ್ ||

ಆಮೇಲೆ, ತುಂಡೀರಮಂಡಲವನ್ನು ನೋಡಿ ಆನಂದವನ್ನು ಅನುಭವಿಸಿ ಮಧ್ಯದಲ್ಲಿರುವ ರಾಷ್ಟ್ರವನ್ನು ದಾಟು.

ಮುಂದೆಸಿಕ್ಕುವ ಚೋಳದೇಶವು ದೂರದಿಂದಲೇ * ನೋಡಬಹುದಾದ ಅಡಕೆಯಮರಗಳ ಗುಂಪಿನಿಂದ ಕಪ್ಪಗೆಯಿದೆ.

ಅಲ್ಲಿ ಕಾವೇರೀನದಿಯು ಮೆಲ್ಲಗೆ ಹರಿಯುತ್ತದೆ. ನದಿಯು ಆ ಭಾಗದಲ್ಲಿ ಮೊಸಳೆಗಳ ತಿರುಗಾಟ ಹೆಚ್ಚಾದುದರಿಂದ ಹೊಳೆಯು ವೇಗವಿಲ್ಲದೇ ಹರಿಯುವಂತೆ ಕಾಣುತ್ತದೆ.

ಸಣ್ಣದಾಗಿಯೂ ದೊಡ್ಡದಾಗಿಯೂ ನಾನಾವಿಧವಾಗಿ ಹರಿಯುತ್ತಿರುವ ಪ್ರವಾಹಗಳಿಂದ, ಪೂರ್ಣವಾಗಿ ಉಪಕೃತವಾದ ಹೊಲಗದ್ದೆಯ ಪ್ರದೇಶಗಳುಳ್ಳ, ಚೋಳದೇಶದ ‡ ಭಾಗಗಳನ್ನು ಕುರಿತು ಹೋಗು.

ಟಿಪ್ಪಣಿ:—* ಕಾಣಿಸುತ್ತಿರುವ.
‡ ಭಾಗಗಳಿಗೆ ಹೋಗು.

## ಪದ್ಯ ೩೭.

ಸಂಧ್ಯಾರಾಗಂ ಸುರಭಿರಜನೀಸಂಭವೈರಂಗರಾಗೈಃ
ಕೇಶೈರ್ಜ್ಯೋತ್ಸ್ನಾಕಲಹಿ ತಿಮಿರಂ ಪಾಳಿಕಾಪೀಡಗರ್ಭೈಃ |
ಆಬಿಭ್ರಾಣಾಸ್ಸರಸಿಜದೃಶೋ ಹಂಸ ದೋಲಾಧಿರೋಹಾತ್
ಆಧಾಸ್ಯಂತೇ ಮದಕಲಗಿರಸ್ತೇಷು ನೇತ್ರೋತ್ಸವಂತೇ ||

ರಾಜಹಂಸವೇ, ಆ ದೇಶದಲ್ಲಿರುವ ಕಮಲಾಕ್ಷಿಯರು ನಿನ್ನ ಕಣ್ಣುಗಳಿಗೆ ಆನಂದವನ್ನುಂಟುಮಾಡುತ್ತಾರೆ.

ಅವರು:—ಸುವಾಸನೆಯಾಗಿರುವ, * ಅರಿಸಿನಮಿಶ್ರವಾಗಿರುವ ಯಕ್ಷಕರ್ದಮವೇ ಮೊದಲಾದ ಸುಗಂಧದ್ರವ್ಯಗಳನ್ನು ಹಚ್ಚಿ ಕೊಳ್ಳು ವುದರಿಂದ ಸಾಯಂಸಂಧ್ಯೆಯಂತೆ ಕೆಂಪಗೆಯಿರುತ್ತಾರೆ.

ಆ ಸರಸಿಜಾಕ್ಷಿಯರು, ತಮ್ಮ ಜಡೆಗಳಿಗೆ ಅಡಕೆಯ ಹೂ ಗಳನ್ನು ಮುಡಿದುಕೊಂಡಿರುವುದರಿಂದ ಬೆಳುದಿಂಗಳನ್ನು ಇದಿರಿಸು ತ್ತಿರುವ ಕತ್ತಲೆಯನ್ನು ಧರಿಸಿರುವಂತೆ ಇರುತ್ತಾರೆ.

ಅಷ್ಟೇ ಅಲ್ಲದೆ, ಅವರು ‡ ಪ್ರಾಯದ ಮನ್ಮಥವಿಕಾರದಿಂದ ಮಾತನಾಡುವಾಗ ಅರ್ಥವಾಗದಿದ್ದರೂ ಇಂಪಾದ ಧ್ವನಿಯುಳ್ಳವ ರಾಗಿದ್ದಾರೆ. ಅಂಬುಜಾಕ್ಷಿಯರಾದ ಇವರು ಉಯ್ಯಾಲೆಯಮೇಲೆ ಕುಳಿತು ವಿನೋದಪಡುತ್ತಿರುವುದರಿಂದ, ನಿನಗೆ ತಪ್ಪದೇ ಆನಂದ ವನ್ನುಂಟುಮಾಡುತ್ತಾರೆ.

ಟಿಪ್ಪಣಿ:—* ಅರಸಿನದಿಂದ ಮಿಶ್ರವಾಗಿರುವ. (ರಜನಿಯೆಂದರೆ:—ಅರಸಿನ.)
‡ ಪ್ರಾಯಕಾಲದ ಮನ್ಮಥವಿಕಾರದಿಂದ.

**ಪದ್ಯ ೩೮.**

ಪೃಥ್ವೀಲೀಲಾತಿಲಕಸುಭಗಂ ಪಶ್ಚಿಮಂ ಭಾಗಮೇಷಾಂ
ನಾಮ್ನಾ ವರ್ಷಂ ಜಲಚರ ನದೀಮಾತೃಕಂ ಗಾಹಮಾನಃ ।
ದ್ರಕ್ಷ್ಯಸ್ಯಾರಾತ್ ಪರಿಮಿತತಯಾ ಮಗ್ನಕೈಲಾಸದೃಶ್ಯಂ
ಶ್ವೇತಂ ಶೈಲಂ ಫಣಿಪತಿಮಿವ ಕ್ಷ್ಮಾತಲಾದುಜ್ಜಿಹಾನಂ ॥

ರಾಜಹಂಸವೇ, * ಭೂದೇವಿಯು ಅಂದಕ್ಕೋಸ್ಕರ ಹಚ್ಚಿ ಕೊಂಡ ಮನೋಹರವಾದ ತಿಲಕದಂತಿರುವ, ವರ್ಷವೆಂಬ

ನದಿಯ ನೀರಿನಿಂದಲೇ ಪೋಷಿತವಾಗಿ ಪೈರುಗಳಿಂದ ಪರಿಪೂರ್ಣ ವಾಗಿರುವ, ಈ ಚೋಳದೇಶದ ಪಶ್ಚಿಮಭಾಗವನ್ನು ಪ್ರವೇಶಿಸು.

ಅಲ್ಲಿ, ತಕ್ಕಷ್ಟು ಪ್ರಮಾಣದಲ್ಲಿ ಸುತ್ತಲೂ ಭೂಮಿಯಲ್ಲಿ ಮುಚ್ಚಿಕೊಂಡಿರುವ ಕೆಲವು ಅವಯವಗಳುಳ್ಳ ‡ ಕೈಲಾಸಗಿರಿಯಂತೆ ಕಣ್ಗೊಳಿಸುತ್ತಿರುವ, ಭೂಮಿಯ ಕೆಳಭಾಗದಿಂದ ಮೇಲಕ್ಕೆ ಹೊರಟು ಬರುತ್ತಿರುವ ಆದಿಶೇಷನಂತೆ ಕಾಣುವ, † ಶ್ವೇತಾದ್ರಿಯನ್ನು ಹತ್ತಿರ ದಲ್ಲಿ ನೋಡುವೆ.

ಟಿಪ್ಪಣಿ:—* ಭೂದೇವಿಯು ತಿಲಕವಚ್ಚಿಕೊಂಡಿರುವ ಸುಂದರಿಯಂತೆ ಪ್ರಕಾಶಿಸುತ್ತಾಳೆ.
‡ ಬೆಳ್ಳಿಯ ಬೆಟ್ಟದಂತೆ.
† ಬಿಳಿಗಿರಿರಂಗನ ಬೆಟ್ಟವನ್ನು.

### ಪದ್ಯ ೩೯.

ಸ್ಫಾರಾಲೋಕಪ್ರಶಮಿತತಮಸ್ಸಂಚಯಂ ತತ್ರ ಪುಂಸಾಂ
ಪ್ರತ್ಯಗ್ರೂಪಂ ಪ್ರಗುಣವಿಭವಂ ಪ್ರಾರ್ಥನೀಯಂ ಬುಧಾನಾಂ।
ನೇದೀಯಾಂಸಂ ಕುಶಲನಿವಹಂ ನಂತುರಾಧಾಸ್ಯತೇ ತೇ
ದಿವ್ಯಂ ತೇಜೋ ಜಲಧಿತನಯಾಸ್ನೇಹನಿತ್ಯಾನುಷಕ್ತಂ॥

ಅಲ್ಲಿ ಸ್ವಯಂಪ್ರಕಾಶವುಳ್ಳದ್ದಾಗಿಯೂ, ಮೇಲಾದ * ಗುಣ ಗಳಿಂದ ಮಹಾಮಹಿಮೆಯುಳ್ಳದ್ದಾಗಿಯೂ, ‡ ದೇವರನ್ನು ತಿಳಿದವ ರಿಗೆ ರಕ್ಷಕನಾಗಿಯೂ ಲಕ್ಷ್ಮೀಪತಿಯಾಗಿಯೂ ಇರುವ, † ಆಶ್ರಿತರ ಅಜ್ಞಾನಸಮುದಾಯವನ್ನು ದಯೆಯಿಂದ ಹಾಳುಮಾಡಿ ಸರ್ವೋ ತ್ಕೃಷ್ಟನಾಗಿರುವ ಭಗವಂತನೆಂಬ ತೇಜಸ್ಸು ಇದೆ. ನಮಸ್ಕರಿಸುವ ತಿರ್ಯಗ್ಜಂತುವಾದ ನಿನಗೂ ಒಳ್ಳೆಯ ಫಲಗಳನ್ನು ಅದು ಬಹುಬೇಗ ಕೈಗೂಡುವಂತೆ ಮಾಡುವುದು.

÷ ಸ್ವಪ್ರಕಾಶರೂಪವುಳ್ಳ, $ ಬತ್ತಿಯೆಂಬ ಹೆಚ್ಚಾದ ಗುಣ ವಿಭವವುಳ್ಳ, ಲಕ್ಷ್ಮೀದೇವಿಯ + ಸ್ನೇಹವೆಂಬ ಎಣ್ಣೆಯಿಂದ ಯಾವಾಗಲೂ ಕೂಡಿರುವುದರಿಂದಲೇ ಹೆಚ್ಚಾದ ಕಾಂತಿಯಿಂದ ಯುಕ್ತವಾಗಿ ಸಂಪೂರ್ಣವಾಗಿ ಹೋಗಲಾಡಿಸಿದ ಕತ್ತಲೆಯ ಸಮು ದಾಯವುಳ್ಳ, ಆದುದರಿಂದಲೇ ಕಣ್ಣುಳ್ಳವರಿಗೆ ಮಿತಿಮೀರಿದ ಕತ್ತಲೆ ಯಲ್ಲಿರುವ ಎಲ್ಲಾ ವಸ್ತುಗಳನ್ನೂ ತಿಳಿಯುವುದಕ್ಕೋಸ್ಕರ × ಅವಶ್ಯಕ ವಾಗಿ ಬೇಕಾಗಿಯೇ ಇರುವ ದೀಪವು, ನಿನಗೆ ಶುಭದ ಪರಂಪರೆ ಯನ್ನು ಬಹಳಬೇಗಕೊಡುವುದು.

ಭಗವಂತನೆಂಬ ದೀಪವು ತನ್ನನ್ನೂ ಇತರರನ್ನೂ ಬೆಳಗಿಸ ಬಲ್ಲುದು. ವ್ಯವಹಾರದ ದೀಪವು ಹಾಗಲ್ಲ.

ಇಲ್ಲಿ ಭಗವಂತನೇ ದೀಪವು. ಅವನ ಸರ್ವಜ್ಞತ್ವಾದಿ ಗುಣಗಳೇ ಬತ್ತಿ. ಲಕ್ಷ್ಮಿಯ ಸ್ನೇಹವೇ ತೈಲವು. ಇಂಥ ದೀಪವು ತನ್ನನ್ನೂ ಇತರ ಎಲ್ಲಾವಸ್ತುಗಳನ್ನೂ ತೊಳಗಿಸಿ ಲೋಕೋತ್ತರವಾದ ಮಹಿಮೆ ಯುಳ್ಳದ್ದಾಗಿದೆ.

ಟಿಪ್ಪಣಿ:—* ಸತ್ಯತ್ವಸರ್ವಜ್ಞತ್ವಾದಿ.

‡ ಭಕ್ತರಿಗೆ.

† ಆಶ್ರಿತರ.

÷ ಭಗವಂತನೆಂಬ ದೀಪವು ಲೋಕದ ದೀಪಕ್ಕಿಂತಲೂ ಬೇರೆಯಾದುದು, ಉತ್ತಮವಾದುದು. ವ್ಯವಹಾರದ ದೀಪವು ಮತ್ತೊಂದನ್ನು ಪ್ರಕಾಶ ಗೊಳಿಸಲಾರದು. ಭಗವಂತನೆಂಬ ದೀಪವಾದರೋ ಎಲ್ಲವನ್ನೂ ಪ್ರಕಾಶಗೊಳಿಸಬಲ್ಲುದು.

$ ಹರಡಿಕೊಳ್ಳುವ ಸ್ವಭಾವವುಳ್ಳ.

+ ದೀಪಕ್ಕೆ ಒಳ್ಳೆಯಬತ್ತಿಯೂ ಹೆಚ್ಚಾದ ಎಣ್ಣೆಯೂ ಇದ್ದರೆ ಚೆನ್ನಾಗಿ ಉರಿಯುತ್ತದೆ.

× ಶಾಶ್ವತವಾದ ಅತಿರಮಣೀಯವಾದ.

### ಪದ್ಯ ೪೦.

ಸ್ನಿಗ್ಧಚ್ಛಾಯಂ ತದನು ವಿತತಂ ತಸ್ಯ ಧಾಮೇವ ನೀಲಂ
ನೀಲೀರಕ್ಷಾನಿಯತಲಲಿತಂ ಕಾನನಂ ಸಂವಿಚೀಯಾಃ |
ದೃಷ್ಟೇ ತಸ್ಮಿನ್ನನಿಮಿಷವಧೂನಿತ್ಯನಿರ್ವೇಶಯೋಗ್ಯೇ
ಸ್ವರ್ಗೋದ್ಯಾನ ಶ್ರಿಯಮಪಿ ಲಘುಂ ಮಂಸ್ಯತೇ ಮಾನಸಂ ತೇ ||

ಆಮೇಲೆ, ದಟ್ಟವಾದ ನೆಳಲುಳ್ಳದ್ದಾಗಿಯೂ, ಭಗವಂತನ * ಅಧಿಕವಾಗಿರುವ ‡ ಕಾಂತಿಯಂತೆ ಶ್ಯಾಮಲವರ್ಣವಾಗಿಯೂ, ನೀಲಿಯೆಂಬ ರಾಕ್ಷಸಿಯ † ರಕ್ಷಣೆಯಿಂದ ನೋಡಲು ಬಹು ಮನೋಹರವಾಗಿಯೂ, ಇರುವ ಆ ವನವನ್ನು ÷ ಸೇವಿಸು.

ಸ್ವರ್ಗಲೋಕದ ಸುಂದರಿಯರ ವಿಹಾರಕ್ಕೆ ಯಾವಾಗಲೂ ಯೋಗ್ಯವಾಗಿರುವ ಅದನ್ನು, ನೀನು ನೋಡಿದಾಗ, ನಿನ್ನ ಮನಸ್ಸು ನಂದನವನದ $ ಕಾಂತಿಯನ್ನು ಬಹಳ ಕೀಳಾದುದನ್ನಾಗಿ ತಿಳಿಯುವುದು.

ಟಿಪ್ಪಣಿ:—* ಸುಪ್ರಸಿದ್ಧವಾಗಿರುವ.
‡ ದಿವ್ಯಮಂಗಳ ವಿಗ್ರಹದಂತೆ.
† ಕಾವಲಿನಿಂದ.
÷ ನೋಡಿ ಸಂತೋಷಪಡು.
$ ಅಂದ. ಸೊಗಸು.

ಪೂರ್ವಕಥೆ:—ಇಲ್ಲಿ ನೀಲಿಯೆಂಬ ರಾಕ್ಷಸಿಯು ಆ ವನವನ್ನು ರಕ್ಷಿಸುತ್ತಾಳೆಂದು ಶ್ವೇತಾದ್ರಿಕ್ಷೇತ್ರದ ಸ್ಥಳಪುರಾಣ ತಿಳಿಸುತ್ತದೆ. ಶ್ರೀರಂಗದ ಸ್ಥಳಪುರಾಣವು:—ಇದಕ್ಕೆ ಮುಂದೆ ಪಶ್ಚಿಮದಲ್ಲಿ ನೀಲೀವನವಿದೆ. ಭಗವಂತನು ಅಲ್ಲಿದ್ದ ವ್ಯಾಘ್ರಾಸುರನನ್ನು ಕೊಂದು ಲೋಕಕ್ಕೆ ಕ್ಷೇಮವನ್ನುಂಟುಮಾಡಿದನು. ಅಲ್ಲಿ ನೀಲೀರಾಕ್ಷಸಿಯು ಕಾವಲಿರುವುದರಿಂದ ಅದರ ಸೊಗಸು ಹೆಚ್ಚಿದೆ.

"ತತಉತ್ತರತಃ ಪಶ್ಚಾತ್ ನೀಲೀವನಮಿತಿಶ್ರುತಂ |
ತತ್ರವ್ಯಾಘ್ರಾಸುರಂಹತ್ವಾ ಭಗವಾನ್ ಭೂತಭಾವನಃ ||"

**ಪದ್ಯ ೪೧.**

ಕುರ್ವನ್ ನಾನಾಕುಸುಮರಜಸಾ ಯತ್ರ ಚಿತ್ರಂ ವಿತಾನಂ
ಪ್ರಾಗಾರಣ್ಯೇ ಮೃದುವಿಚಲಯನ್ ಪಾಳಿಕಾಚಾಮರಾಣಿ।
ಪಾದನ್ಯಾಸಕ್ಷಮಮವಕಿರನ್ ಕ್ಷ್ಮಾತಲಂ ಪುಷ್ಪಜಾಲೈಃ
ಪ್ರಾಯೋ ವಾಯುಃ ಪರಿಜನವಿಧಿಂ ಪಂಚಬಾಣಸ್ಯ ಧತ್ತೇ ॥

ಈ ಪದ್ಯದಲ್ಲಿ ಅಡಕೆಯತೋಟದ ಮಂದಮಾರುತವು ರಮಣೀಯವಾಗಿ ವರ್ಣಿತವಾಗಿದೆ:—

ಆ ವನದಲ್ಲಿರುವ ಅಡಕೆಯತೋಟಗಳಲ್ಲಿ ಅನೇಕ ವರ್ಣದ ಹೂಗಳ ಧೂಳಿಯಿಂದ ಬೇರೆಬೇರೆ ಬಣ್ಣದ ಮೇಲುಕಟ್ಟನ್ನು ಮಂದಮಾರುತವು ಕಟ್ಟುವುದು. ಅಡಕೆಯ * ಹೂಗೊಂಚಲೆಂಬ ಚಾಮರಗಳನ್ನು ಹಿತಕರವಾಗಿ ಬೀಸುವುದು. ನೆಲವು ಹೆಜ್ಜೆಗಳನ್ನಿಡಲು ಮೆತ್ತಗಿರುವಂತೆ ಹೂಗಳರಾಶಿಯನ್ನು ಎರಚುವುದು, ಎಂದರೆ ‡ ಮಂದಮಾರುತವು ಮನ್ಮಥನ ಸೇವಕನಂತೆ ಕೆಲಸಮಾಡುತ್ತದೆಯೆಂದು ಊಹಿಸಬಹುದು.

ದೊಡ್ಡವರು ನಮ್ಮಗಳಮನೆಗೆ ಆಹ್ವಾನಿತರಾದಾಗ † ಮನೆಗಳಿಗೆ ನಾನಾವರ್ಣದ ಮೇಲುಕಟ್ಟನ್ನು ಕಟ್ಟುವುದು ವಾಡಿಕೆ ಮತ್ತು ಬೀಸಣಿಗೆ ಅಥವಾ ಚಾಮರದಿಂದ ಬೀಸುವುದೂ ನೆಲಕ್ಕೆ ರತ್ನಗಂಬಳಿಗಳನ್ನು ಹಾಸುವುದೂ ರೂಢಿ.

ಟಿಪ್ಪಣಿ:—* ಹೊಂಬಾಳೆ.

‡ ಮೆಲ್ಲನೆಬೀಸುವಗಾಳಿ.

† ಚಪ್ಪರಗಳಿಗೆ.

### ಪದ್ಯ ೪೨.

ಸ್ರೋತೋವೇಗಾದಥ ಜನಪದಂ ಸೌಮ್ಯ ಸೀಮಂತಯಂತೀ
ಪ್ರತ್ಯಾದೇಶೋ ವಿಬುಧಸರಿತಸ್ಸ್ಯಂದತೇ ಸಹ್ಯಕನ್ಯಾ |
ಕಾಲೇಕಾಲೇ ಪರಿಣತಿವಶಾತ್ ಪರ್ವಭೇದಾವಕೀರ್ಣೈಃ
ಪುಂಡ್ರೇಕ್ಷೂಣಾಂ ಪುಳಿನವಿಶದೈರ್ಗದ್ಗದಾ ಮೌಕ್ತಿಕೌಘೈಃ ||

ಸೌಮ್ಯವಾದ ಹಂಸವೇ, ಆಮೇಲೆ ಪ್ರವಾಹದ ವೇಗದಿಂದ ಚೋಳದೇಶವನ್ನು ಎರಡುಭಾಗವಾಗಿ ಮಾಡಿ ಗಂಗೆಗಿಂತ ಮೇಲಾಗಿರುವ ಕಾವೇರಿಯು ಪ್ರವಹಿಸುತ್ತದೆ.

(ಕಾವೇರಿಯು ಚೋಳದೇಶದ ಮಧ್ಯದಲ್ಲಿ ಹರಿಯುತ್ತದೆ.) ಅದರ ತೀರಗಳಲ್ಲಿ ಬೆಳೆದು, ಆಯಾಕಾಲಗಳಲ್ಲಿ ಫಲಕ್ಕೆ ಬರುವುದರಿಂದ ಪಟ್ಟಾಪಟ್ಟೆ ಕಬ್ಬಿನಗಿಣ್ಣುಗಳು ಬಲಿತು ಬಿರಿಯುವವು.

ಇದರಿಂದ ಎಲ್ಲೆಲ್ಲೂ ಸುರಿದು *ಸ್ವಚ್ಛವಾದ ಮಣಲಂತೆ ರಾಶಿರಾಶಿಯಾಗಿ ಹೊಳೆಯುತ್ತಿರುವ, ಮುತ್ತುಗಳ ಗುಂಪುಗಳಿಂದ ಕಾವೇರೀನದಿಯು, ಹಳ್ಳತಿಟ್ಟಾದಂತೆ ಕಾಣುತ್ತದೆ.

ಟಿಪ್ಪಣಿ:--* ದ್ವೀಪಗಳಂತೆ ಕಾಣುವ.

‡ ನದಿಯ ಪಾತ್ರವು.

ಸ್ಕಾಂದಪುರಾಣದಲ್ಲಿ ರತ್ನಪರೀಕ್ಷಾಧ್ಯಾಯದಲ್ಲಿ ಮುತ್ತಿನ ಉತ್ಪತ್ತಿ ಸ್ಥಾನಗಳು ಈ ಕೆಳಗಿನವುಗಳೆಂದು ಹೇಳಿವೆ:--ಶಂಖ, ಮೀನಿನತಲೆ, ಮೇಘ, ಬಿದಿರು, ಕಾಡುಹಂದಿಯ ಕೋರೆ, ಹಾವಿನ ಹೆಡೆ, ಆನೆಯ ದಂತ. ಪಟ್ಟಾಪಟ್ಟೇ ಕಬ್ಬಿನಗಿಣ್ಣು ಮುತ್ತಿನಚಿಪ್ಪು ಇತ್ಯಾದಿ. ಇಲ್ಲಿ ನಮಗೆ ಪ್ರಕೃತವಾದುದು ಪಟ್ಟಾಪಟ್ಟೇ ಕಬ್ಬಿನವಿಷಯ.

### ಪದ್ಯ ೪೩.

ಸಹ್ಯೋತ್ಸಂಗಾತ್ ಸಪದಿ ಮರುತಾ ಸಾಗರಂ ನೀಯಮಾನಾಂ
ಭದ್ರಾಲಾಪೈರ್ವಿಹಿತಕುಶಲಾಂ ತ್ವಾದೃಶಾನಾಂ ದ್ವಿಜಾನಾಂ |
ಯಾಮುಸ್ಕನ್ನಾಸ್ಸರಸಕುಹಳೀಪತ್ರಪಾತ್ರೈರ್ನಿಶಾಂತೇ
ಮಂದಸ್ಮೇರಾಂ ಮಧುಪರಿಮಳೈರ್ವಾಸಯಂತೀವ ಪೂಗಾಃ ||

ಸಹ್ಯಾದ್ರಿಯ ತಪ್ಪಲುಪ್ರದೇಶದಿಂದ ಹೊರಟು, ತತ್ ಕ್ಷಣವೇ ವಾಯುವಿನ ಜತೆಯಲ್ಲೇ ಸಮುದ್ರದಕಡೆಗೆ ಹೋಗುತ್ತಿರುವ, ನಿನ್ನಂಥ ಪಕ್ಷಿಗಳ ಶುಭಕರಗಳಾದ ಮಾತುಗಳಿಂದ ಕ್ಷೇಮಸಮಾಚಾರ ಕೇಳಿದ, ಹೂವಿನ ಒಳಭಾಗದಲ್ಲಿರುವ ರಸದಿಂದ ನೆನೆದುಹೋದ ಅಡಕೆಯ ಹೂದಳಗಳು ಬೀಳುವುದರಿಂದ * ಮಂದಹಾಸವುಳ್ಳ, ಕಾವೇರಿಯನ್ನು, ಬೆಳಗಿನಜಾವದಲ್ಲಿ, † ರಸವತ್ತಾಗಿರುವ ಅಡಕೆಯ ಮರಗಳು, ಪುಷ್ಪರಸದ ಸುವಾಸನೆಗಳಿಂದ ವಾಸಿತಳನ್ನಾಗಿ ಮಾಡುತ್ತವೋ ಎಂಬಂತೆ ಊಹಿಸುತ್ತೇನೆ.

‡ ತಂದೆಯ ತೊಡೆಯಮೇಲಿಂದ, ಕೂಡಲೇ ಸಹೋದರನೇ ಮೊದಲಾದ ಆಪ್ತರೊಡನೆ ಗಂಡನಮನೆಗೆ ಹೋಗುತ್ತಿರುವ ಸಮಯದಲ್ಲಿ, ಶುಭಶಕುನಸೂಚಿಸುವ ಪಕ್ಷಿಗಳ ಧ್ವನಿಗಳಿಂದ ಕ್ಷೇಮಸಮಾಚಾರ ಸೂಚಿಸಿದ, ಯೋಗ್ಯರಾದ ಬ್ರಾಹ್ಮಣರ ಆಶೀರ್ವಾದಗಳಿಂದ ಕ್ಷೇಮವನ್ನು ಪಡೆದ, ಹೆಚ್ಚಾದ ಸಂತೋಷದಿಂದ ಮುಗುಳುನಗೆಯನ್ನು ಹೊರಡಿಸುತ್ತ ಗಂಡನಮನೆಗೆ ಹೋಗುತ್ತಿರುವ ಸುಂದರಿಯನ್ನು, ಉಷಃಕಾಲದಲ್ಲಿ ತಮ್ಮ ತಮ್ಮ ಮನೆಗಳಲ್ಲಿ ಪ್ರೇಮದಿಂದ, ಹಿತಕರವಾಗಿರುವ ನೆಂಟರಗುಂಪುಗಳು, ರಸವತ್ತಾದ ಗಂಧವೇ ಮೊದಲಾದ ದ್ರವ್ಯಗಳ ಪರಿಮಳದಿಂದ ಸುವಾಸಿತಳನ್ನಾಗಿ ಮಾಡುತ್ತಾರೋ ಎಂಬಂತೆ ಊಹಿಸುತ್ತೇನೆ.

÷ ತಂದೆಯಮನೆಯಿಂದ ಸಹೋದರ ಮೊದಲಾದ ಆಪ್ತಬಂಧುವಿನ ಜತೆಯಲ್ಲಿ ಗಂಡನಮನೆಗೆ ಕರೆದುಕೊಂಡು ಹೋಗುತ್ತಿರುವ, ವೇದವಿತ್ತಾದ ಬ್ರಾಹ್ಮಣರ ಆಶೀರ್ವಾದಪಡೆದಿರುವ, ಸಂತೋಷದಿಂದ § ಮಂದಹಾಸವುಳ್ಳ, ಆಗತಾನೇ ಗಂಡನಮನೆಗೆ ಹೋಗುತ್ತಿರುವ ರಮಣಿಯವೃತ್ತಾಂತವು ತೋರಿಬರುವುದು.

ಟಿಪ್ಪಣಿ:—* ಅಲ್ಲಲ್ಲೇ ನೀರಿನಲ್ಲಿ ಬಿದ್ದಿರುವ ಆ ಬಿಳಿಯಹೂಗಳಿಂದ ಸ್ವಲ್ಪಪಟ್ಟಿಗೆ ಹೊಳೆಯುತ್ತಿರುವ.

‡ ಸೊಂಪಾಗಿರುವ.

† ತಂದೆಯಮನೆಯಿಂದ ಹೊರಟು.

÷ ತವರ್‌ಮನೆಯಿಂದ=ತೌರುಮನೆಯಿಂದ.

$ ಕಿರುನಗೆಯುಳ್ಳ.

**ಪದ್ಯ ೪೪.**

ತಸ್ಮಿನ್ ದ್ರಕ್ಷ್ಯಸ್ಯಮರವಮಹಿಳಾವಮೌಳಿಗಂಧೈರವಂಧ್ಯಾಂ
ಆತನ್ವಾನಾಂ ವ್ಯಪಗತರಸಂ ಮಾನಸೇ ಮಾನಸಂ ವಃ |
ತೀರ್ಥೈರನ್ಯೈರಪಿ ಪರಿಗತಾಂ ಶುದ್ಧಿಹೇತೋಸ್ಸಮಂತಾತ್
ಚಂದ್ರೋಲ್ಲಾಸಪ್ರಥಿತಯಶಸಸ್ಸಂಪದಂ ಪುಷ್ಕರಿಣ್ಯಾಃ ||

ಎಲೈ ಹಂಸವೇ, ನೀನು ಚಂದ್ರಪುಷ್ಕರಿಣೀಸರೋವರದ ರಮಣೀಯತೆಯನ್ನು ನೋಡುವೆ:—

ಅದು, ಚೋಳದೇಶದಲ್ಲಿದೆ. ಅಲ್ಲಿ ದೇವಸ್ತ್ರೀಯರು ಸ್ನಾನ ಮಾಡುತ್ತಾರೆ. ಅವರ ತಲೆಗೂದಲಿನ ವಾಸನೆಯಿಂದ ಅದರ ನೀರು ಪರಿಮಳಯುಕ್ತವಾಗಿದೆ.

ಅದರಸೊಗಸು ಮಾನಸಸರೋವರದ ಸೊಬಗನ್ನೂ ಮೀರಿದೆ. ಇದನ್ನು ನೋಡಿದಮೇಲೆ ನಿನಗೆ ಆ ಸರೋವರದಲ್ಲಿರುವ ಪ್ರೀತಿಯು ಕಡಿಮೆಯಾಗುತ್ತದೆ. ಅನೇಕ ಪುಣ್ಯಕ್ಷೇತ್ರಗಳು, ತಾವು ಪರಿಶುದ್ಧವಾಗಲು ಇದರಸುತ್ತಲೂ ನೆಲೆಗೊಂಡಿವೆ

ಈ ಸರಸ್ಸು ಚಂದ್ರನ ಕ್ಷಯರೋಗವನ್ನೂ ನಾಶಮಾಡಿದುದರಿಂದ ಅವನಿಗೆ ಸುಖ ಹೆಚ್ಚಿತು. ಇಂತಹ ಸುಪ್ರಸಿದ್ಧ ಕೀರ್ತಿಶಾಲಿಯಾದ ಆ ಚಂದ್ರಸರೋವರದ ರಮ್ಯತೆಯನ್ನು ನೋಡುವೆ.

ಟಿಪ್ಪಣಿ:—ದಕ್ಷಬ್ರಹ್ಮನಿಗೆ ಇಪ್ಪತ್ತೇಳುಜನ ಪುತ್ರಿಯರಿದ್ದರು. ಇವರನ್ನು ಚಂದ್ರನಿಗೆ ಮದುವೆಮಾಡಿಕೊಟ್ಟನು. ಅವನು ಆ ಪುತ್ರಿಯರಲ್ಲಿ ರೋಹಿಣೀದೇವಿಯನ್ನು

ಮಾತ್ರ ಅತಿಶಯವಾಗಿ ಪ್ರೀತಿಸಿ ಉಳಿದವರನ್ನು ಅಲಕ್ಷಿಸಿದನು. ಇವರು ಗಂಡನಮೇಲೆ ತಂದೆಯಲ್ಲಿ ದೂರುಹೇಳಿದರು. ಮಾವನು ಅಳಿಯನನ್ನು ಕುರಿತು, "ಎಲ್ಲರಿಗೂ ನೀನು ಸಮನಾಗಿ ಅನುಕೂಲವಾಗಿರು" ಎಂದು ಅನೇಕಸಲ ಬುದ್ಧಿ ಹೇಳಿದರೂ ಕೇಳಲಿಲ್ಲವಾದುದರಿಂದ, "ಕ್ಷಯರೋಗದಿಂದ ನೀನು ನರಳು" ಎಂದು ದಕ್ಷನು ಶಪಿಸಿದನು.

ಚಂದ್ರನು ಅದಕ್ಕೆ ಹೆದರಿ ಈ ಕ್ಷೇತ್ರದ ಸರೋವರದಲ್ಲಿ ಸ್ನಾನಮಾಡಿ ನೀರಿನಲ್ಲೇ ನಿಂತು ಅನೇಕವರ್ಷಗಳು ಶ್ರೀಹರಿಯನ್ನು ಕುರಿತು ತಪಸ್ಸುಮಾಡಿದನು. ಅಲ್ಲಿನ ತಾವರೆಗಳಿಂದ ನಿತ್ಯವೂ ಭಗವಂತನನ್ನು ಪೂಜಿಸುತ್ತಿದ್ದನು. ಇವನ ಭಕ್ತಿಗೆ ಮೆಚ್ಚಿ ದೇವನು ಪ್ರತ್ಯಕ್ಷನಾದನು.

"ಚಂದ್ರನೇ, ನಿನ್ನ ಇಷ್ಟಾರ್ಥವು ಈ ಸರಸ್ಸಿನಲ್ಲಿ ನೆರವೇರಿದುದರಿಂದ ಇದಕ್ಕೆ ಚಂದ್ರಸರಸ್ಸೆಂದು ಪ್ರಸಿದ್ಧಿಯಾಗಲಿ, ನಿನ್ನ ರೋಗಪರಿಹಾರವಾಗಲಿ, ಇಷ್ಟಾರ್ಥಗಳು ಕೈಗೂಡಲಿ" ಎಂದು ವರವಿತ್ತು ಆಶೀರ್ವದಿಸಿ ಕಣ್ಮರೆಯಾದನು. **ಗರುಡಪುರಾಣ.**

## ಪದ್ಯ ೪೫.

ತೀರೇ ತಸ್ಯಾ ವಿರಚಿತಪದಂ ಸಾಧುಭಿಸ್ಸೇವ್ಯಮಾನಂ
ಶ್ರದ್ಧಾಯೋಗಾತ್ ವಿನಮಿತತನುಶ್ಶೇಷಪೀಠಂ ಭಜೇಥಾಃ |
ಯಸ್ಮಿನ್ ಅಸ್ಮತ್ಕುಲಧನತಯಾ ಸೌಮ್ಯ ಸಾಕೇತಭಾಜಃ
ಸ್ಥಾನಂ ಭವ್ಯಂ ಮುನಿಭಿರುದಿತಂ ಶ್ರೀಮತೋ ರಂಗಧಾಮ್ನಃ ||

ಎಲೈ ಸೌಮ್ಯನೇ, ಆ ಸರೋವರದ ದಡದಲ್ಲಿ ನೆಲೆಗೊಂಡು ಸತ್ಪುರುಷರಿಂದ ಸೇವಿತವಾಗುತ್ತಿರುವ, ಅನಂತಾಸನವನ್ನು ಆಸ್ತಿಕ ಬುದ್ಧಿಯಿಂದ ತಲೆಬಾಗಿಸಿ ನಮಸ್ಕರಿಸು.

ನಮ್ಮ ಪೂರ್ವಿಕರಾದ ಇಕ್ಷ್ವಾಕುರಾಜರ ವಂಶಕ್ಕೆ ಮೊದಲಿನಿಂದಲೂ ಶ್ರೀರಂಗನಾಥನು ಕುಲದೇವತೆ. ಅವನೀಗ ಅಯೋಧ್ಯೆಯಲ್ಲಿ ನೆಲೆಗೊಂಡಿದ್ದಾನೆ.

ಎಲ್ಲ ವಿಧವಾದ ಸಂಪತ್ತುಗಳಿಂದಲೂ ಕೂಡಿರುವ, ರಂಗವಿಮಾನವೆಂಬ ಪುಣ್ಯಕ್ಷೇತ್ರದಲ್ಲಿ ಭಗವಂತನಿಂದ ನೆಲೆಸೋಣವು ಮುಂದಿನಕಾಲದಲ್ಲಿ ನಡೆಯುವುದೆಂದು ಋಷಿಗಳು ಹೇಳಿದ್ದಾರೆ. ಅಂಥ ಶೇಷಪೀಠವನ್ನು ನಮಸ್ಕರಿಸು.

ಶ್ರೀರಂಗನಾಥನು, ಕೆಲವುಕಾಲ ಕಳೆದಮೇಲೆ ಅಯೋಧ್ಯೆಯಿಂದ ಹೋಗಿ ಆ ಶೇಷಪೀಠದಲ್ಲಿ ನೆಲೆಗೊಳ್ಳುವನೆಂದು ಋಷಿಗಳು ಭವಿಷ್ಯವನ್ನು ನುಡಿದಿರುವರು. ಆದುದರಿಂದ ಅಲ್ಲಿರುವ ಅನಂತಾಸನವನ್ನು ಭಕ್ತಿಯಿಂದ ನಮಸ್ಕರಿಸು.

ಟಿಪ್ಪಣಿ:—ಪೂರ್ವಕಥೆ—ಧರ್ಮವರ್ಮನೆಂಬ ರಾಜನು ನಾರಾಯಣನನ್ನು ಕುರಿತು ತಪಸ್ಸುಮಾಡುತ್ತಿದ್ದನು. ಆಗ ಋಷಿಗಳು ಅವನಿಗೆ ಈ ರೀತಿ ಹೇಳಿದರು. "ರಾಜನೇ, ನಾರಾಯಣನು ರಂಗನಾಥರೂಪದಲ್ಲಿ ಅಯೋಧ್ಯೆಯಲ್ಲಿ ಇಕ್ಷ್ವಾಕು ವಂಶೀಯರಿಂದ ಈಗ ಪೂಜಿತನಾಗುತ್ತಿದ್ದಾನೆ. ಮುಂದೆ ವಿಭೀಷಣನ ಮೂಲಕ ಅವನು ಇಲ್ಲಿ ಕಾವೇರೀ ತೀರದಲ್ಲಿ ಬಂದು ನೆಲಸುವನು. ನೀನು ರಾಜ್ಯಕ್ಕೆ ಹೋಗು" ನಾವು ಸಮಯದಲ್ಲಿ ನಿನಗೆ ತಿಳಿಸುವೆವು, ಎಂದರು. ರಾಜನು ಹಾಗೆಯೇ ಮಾಡಿದನು.

ರಾಮನು ರಾವಣವಧಾನಂತರ ಅಯೋಧ್ಯೆಯಲ್ಲಿ ಅಭಿಷಿಕ್ತನಾದನು. ವಿಭೀಷಣನಿಗೆ ತನ್ನ ಕುಲದೈವ ಶ್ರೀ ರಂಗನಾಥನನ್ನು ದಯಪಾಲಿಸಿದನು. ಅವನು ಲಂಕೆಗೆ ಹೋಗುವ ದಾರಿಯಲ್ಲಿ ಕಾವೇರೀ ತೀರದಲ್ಲಿ ಅನಂತಪೀಠದಲ್ಲಿ ದೇವರನ್ನು ಪ್ರತಿಷ್ಠೆ ಮಾಡಿದನು.

ಅಂದಿನಿಂದ ಆ ಸ್ಥಳಕ್ಕೆ ಶ್ರೀರಂಗಕ್ಷೇತ್ರವೆಂದು ಹೆಸರು ಬಂದಿತು. ಆ ರಾಜನೂ ಋಷಿಗಳೂ ದೇವರ ದರ್ಶನದಿಂದ ಕೃತಾರ್ಥರಾದರು. ಈಗಲೂ ಭಕ್ತರು ಕೃತಾರ್ಥರಾಗುತ್ತಲಿದ್ದಾರೆ. ಈ ಯಂಶವು ಬ್ರಹ್ಮಾಂಡಪುರಾಣ ಪಾರಮೇಶ್ವರ ಸಂಹಿತೆಗಳಲ್ಲಿ ಪ್ರತಿಪಾದಿತವಾಗಿದೆ.

**ಪದ್ಯ ೪೬.**

ಸತ್ತ್ವೇ ದಿವ್ಯೇ ಸ್ವಯಮುದಯತಸ್ತಸ್ಯ ಧಾಮ್ನಃ ಪ್ರಸಂಗಾತ್
ಮಂಜೂಷಾಯಾಂ ಮರಕತಮಿವ ಭ್ರಾಜಮಾನಂ ತದಂತಃ ।
ಚೇತೋ ಧಾವತ್ಯುಪಹಿತಭುಜಂ ಶೇಷಭೋಗೇಶಯಾನಂ
ದೀರ್ಘಾಪಾಂಗಂ ಜಲಧಿತನಯಾ ಜೀವಿತಂ ದೇವಮಾದ್ಯಂ ॥

ಈ ಪದ್ಯದಲ್ಲಿ ರಂಗನಾಥಸ್ವಾಮಿಯು ಮನೋಹರವಾಗಿ ವರ್ಣಿತನಾಗಿದ್ದಾನೆ:—ಶುದ್ಧಸತ್ತ್ವಮಯವಾದ ನಿತ್ಯ * ವಿಭೂತಿಯಲ್ಲಿ ಪರವಾಸುದೇವನು ತನ್ನಷ್ಟಕ್ಕೆ ತಾನೇಕಾಣಿಸಿಕೊಳ್ಳುವನು. ಅವನೇ ಶ್ರೀರಂಗವಿಮಾನದ ಮಧ್ಯಭಾಗದಲ್ಲಿ ರಂಗನಾಥನಾಗಿ, ಪೆಟ್ಟಿಗೆಯಲ್ಲಿಟ್ಟಿರುವ ಪಚ್ಚೆಯಂತೆ ಹೊಳೆಯುವನು.

ಆ ದೇವನು ಕೈಯ್ಯನ್ನೇ ತಲೆದಿಂಬಾಗಿಟ್ಟುಕೊಂಡಿರುವನು. ಆದಿಶೇಷನ ಉತ್ತಮವಾದ ‡ ಭೋಗದಮೇಲೆ ಮಲಗಿರುವನು.

ದಯಾಪೂರ್ಣವಾದ ಕಟಾಕ್ಷವುಳ್ಳವನು. ಲಕ್ಷ್ಮಿಗೆ ಪ್ರಾಣ ವಲ್ಲಭನಾಗಿಯೂ (ಜಗತ್ತುಗಳಿಗೆ) ಮುಖ್ಯಪ್ರಭುವಾಗಿಯೂ ಇರುವ ಆ ಪರವಾಸುದೇವನನ್ನು ನನ್ನ ಮನಸ್ಸು † ಸ್ಮರಿಸುವುದು.

ಟಿಪ್ಪಣಿ:—* ವೈಕುಂಠಲೋಕದಲ್ಲಿ.
‡ ದೇಹದ.
† ನೆನಪಿಗೆ ತಂದುಕೊಳ್ಳುವುದು.

**ಪದ್ಯ ೪೭.**

ಚೋರಾಕ್ರಾಂತಂ ತದನು ವಿಪಿನಂ ಚೋಳಪಾಂಡ್ಯಾಂತರಸ್ಥಂ
ಝಿಲ್ಲೀನಾದಶ್ರವಣಪರುಷಂ ಶೀಘ್ರಮೇವ ವ್ಯತೀಯಾಃ ।
ತೀರ್ಣೇ ತಸ್ಮಿನ್ ಪ್ರಕಟಯ ಸಖೇ ಶೀತಲಾಂಸ್ತೇ ನಿನಾದಾನ್
ಶಬ್ದಾಯಂತೇ ನ ಖಲು ಕವಯಸ್ಸನ್ನಿಧೌ ದುರ್ಜನಾನಾಂ ॥

ಎಲೈ ಹಂಸವೇ, * ತರುವಾಯ ಚೋಳ ಪಾಂಡ್ಯದೇಶಗಳ ಕಾಡು ಸಿಕ್ಕುವುದು. ಅದು, ಕಳ್ಳಕಾಕರಿಂದ ತುಂಬಿ ಭಯಂಕರ ವಾಗಿದೆ. ಜೀರುಂಡೆಗಳ ಧ್ವನಿ ಕಿವಿಯಿಂದ ಕೇಳಲು ಆಗದಷ್ಟು ಅಸಹ್ಯವಾಗಿದೆ. ಅಂಥ ಪ್ರದೇಶವನ್ನು ಬೇಗ ದಾಟಿಹೋಗು. ಅನಂತರ ಕಿವಿಗೆ ಹಿತವಾಗುವಂತೆ ನೀನು ಕೂಗಬಹುದು.

‡ ಕೆಟ್ಟವರ ಸಮೀಪದಲ್ಲಿ † ಉತ್ತಮಕವಿಗಳು ಮಾತನ್ನೂ ಆಡುವುದಿಲ್ಲವಷ್ಟೇ.

ಟಿಪ್ಪಣಿ:—* ಶೇಷಪೀಠದರ್ಶನಾನಂತರ.
‡ ಕವಿದ್ವೇಷಿಗಳ.
† ಜಲಚರಪಕ್ಷಿಗಳು. ಹಂಸಗಳು.

**ಪದ್ಯ ೪೮.**

ಪ್ರಸ್ತಾಸೀಡಂ ಪ್ರಚಲದಲಕಂ ವ್ಯಕ್ತತಾಟಂಕರತ್ನಂ
ಮುಕ್ತಾಚೂರ್ಣಸ್ಫುರಿತತಿಲಕಂ ವಕ್ತ್ರಮುತ್ತಾನಯಂತ್ಯಃ ।
ದೇಶೇ ತಸ್ಮಿನ್ ಕುವಲಯದೃಶೋ ಜಾತಕೌತೂಹಲಾಸ್ತ್ವಾಂ
ಮಾಲಾದೀರ್ಘೈರ್ಮಧುರವಿರುತಂ ಮಾನಯಿಷ್ಯನ್ತ್ಯಪಾಂಗೈಃ ॥

ಪಾಂಡ್ಯದೇಶದ ಸುಂದರಿಯರು ನಿನ್ನನ್ನು ಗೌರವಿಸುತ್ತಾರೆ:-

ನೈದಿಲೆಯಂತೆ ಮನೋಹರವಾದ ಕಣ್ಣುಗಳುಳ್ಳ ಅವರು, ನಿನ್ನನ್ನು ನೋಡಬೇಕೆಂಬ ಆಸೆಯುಳ್ಳವರಾಗಿದ್ದಾರೆ. ತಲೆಯಲ್ಲಿ ಸಡಿಲವಾಗಿ ಹೂಮುಡಿದುಕೊಂಡಿರುವರು. ಅವರ ಮುಂಗುರುಳು ಅಲುಗಾಡುತ್ತಿವೆ. ರತ್ನಖಚಿತವಾದ ಓಲೆಗಳನ್ನು ಧರಿಸಿರುವರು. ಪ್ರಕಾಶವಾದ ಮುತ್ತಿನಪುಡಿಯಿಂದ ತಿಲಕವನ್ನು ಧರಿಸಿರುವರು. ಇಂತಹ ರಮಣಿಯರು ಮುಖವನ್ನು ಮೇಲಕ್ಕೆತ್ತಿ ನೈದಿಲೆಹೂವಿನ ಮಾಲೆಯಂತೆ ಬಹುದೂರ ವ್ಯಾಪಿಸಿರುವ *ಕಟಾಕ್ಷಗಳಿಂದ ಕಿವಿಗಿಂಪಾಗಿ ಕೂಗುತ್ತಿರುವ ನಿನ್ನನ್ನು ಗೌರವಿಸುತ್ತಾರೆ.

ಟಿಪ್ಪಣಿ:—* ಕಡೆಗಣ್ಣಿನ ನೋಟಗಳಿಂದ.

**ಪದ್ಯ ೪೯.**

ನಿತ್ಯಾವಾಸಂ ವೃಷಭಮಚಲಂ ಸುಂದರಾಖ್ಯಸ್ಯ ವಿಷ್ಣೋಃ
ಪ್ರತ್ಯಾಸೀದನ್ ಸಪದಿ ವಿನಮದ್ಭಾಗಧೇಯಂ ನತಸ್ಸ್ಯಾಃ ।
ಯಸ್ಯೋತ್ಸಂಗೇ ಬಲಿವಿಜಯಿನಸ್ತಸ್ಯ ಮಂಜೀರವಾಂತಂ ।
ಪಾಥೋ ದಿವ್ಯಂ ಪಶುಪತಿಜಟಾಸ್ಪರ್ಶಶೂನ್ಯಂ ವಿಭಾತಿ ॥

* ಎಲ್ಲೆಲ್ಲೂ ಹರಡಿಕೊಂಡು ಸುಂದರಬಾಹುವೆಂದು ಪೂಜಿತನಾಗುವ ಭಗವಂತನು ಭಕ್ತರನ್ನು ಕಾಪಾಡಲು ವೃಷಭಪರ್ವತದಲ್ಲಿ ನೆಲೆಸಿರುವನು. ಇದನ್ನು ದರ್ಶನಮಾಡುವುದರಿಂದಲೇ ಭಕ್ತರಿಗೆ

ಅನೇಕ ಉತ್ತಮವಾದ ಫಲಗಳು ದೊರೆಯುವುವು. ಇಂತಹ ಕ್ಷೇತ್ರಕ್ಕೆ ಹೋಗಿ ಕೂಡಲೇ ದೇವರನ್ನು ನಮಸ್ಕರಿಸು.

ಈ ಶಿಖರಿಯಮೇಲೆ ನೂಪುರಗಂಗಾತೀರ್ಥವು ನೆಲೆಗೊಂಡಿದೆ. ಇದು ಬಲಿಚಕ್ರವರ್ತಿಯನ್ನು ಅಡಗಿಸಿದ ಶ್ರೀ ತ್ರಿವಿಕ್ರಮನ ‡ ಕಾಲು ಗಡಗದಿಂದ ಹೊರಕ್ಕೆಹೊರಟುಬಂದ ಸ್ವರ್ಗೀಯವಾದ ಜಲವು, ಶ್ರೀ ಶಿವನಜಡೆಗಳ ಸಂಬಂಧವಿಲ್ಲದುದಾಗಿ ಹೀಗೆ ಪ್ರಕಾಶಿಸುತ್ತದೆ.

ಟಿಪ್ಪಣಿ:—* ಸರ್ವವ್ಯಾಪಕನಾಗಿ.

‡ ಬ್ರಹ್ಮನು ಅಭಿಷೇಕಮಾಡುವಾಗ.

ಈ ಪದ್ಯಕ್ಕೆ ನೂಪುರಗಂಗೆಯ ಪ್ರಾಶಸ್ತ್ಯವರ್ಣನದಲ್ಲಿ ಮಾತ್ರವೇ ತಾತ್ಪರ್ಯ, ಅಷ್ಟೇಹೊರ್ತು ಸುಪ್ರಸಿದ್ಧ ಗಂಗೆಯಲ್ಲಿ ನ್ಯೂನತೆ ಹೇಳುವುದರಲ್ಲಿ ಅಲ್ಲವೇ ಅಲ್ಲ.

## ಪದ್ಯ ೫೦.

**ಈಶಾದಸ್ತ್ರಾಣ್ಯಧಿಗತವತಾಂ ಕ್ಷತ್ರಿಯಾಣಾಂ ಪ್ರಭಾವಾತ್**
**ಕಾರಾಽಽವಾಸಸ್ಮರಣಚಕಿತೈಸ್ಸಿಕ್ತಸಸ್ಯಾಂ ಪಯೋದೈಃ |**
**ಪಶ್ಯನ್ ಯಾಯಾಃ ಪರಮುಲಕಯಾ ಸ್ಪರ್ಧಮಾನೈರಜಸ್ರಂ**
**ಪುಣ್ಯಾವಾಸೈಃ ಪುರಜನಪದೈರ್ಮಂಡಿತಾನ್ ಪಾಂಡ್ಯದೇಶಾನ್ ||**

ಪಾಂಡ್ಯದೇಶದರಾಜರು ಈಶ್ವರನ ಅನುಗ್ರಹದಿಂದ ದಿವ್ಯಾಸ್ತ್ರ ಸಂಪನ್ನರು. ಮಹಾ ವೀರರಾದುದರಿಂದ ಮಳೆಯ ಅಭಿಮಾನದೇವತೆ ಗಳನ್ನೇಕೈಸೆರೆಹಿಡಿದು * ಕಾರಾಗಾರದಲ್ಲಿ ಹಾಕಿದ್ದರು. ಆಗ ಆ ದೇವತೆಗಳು ಬಹಳ ಕಷ್ಟವನ್ನು ಅನುಭವಿಸಬೇಕಾಯ್ತು. ಆಮೇಲೆ ರಾಜರು ಅವರನ್ನು ಸೆರೆಯಿಂದ ಬಿಡುಗಡೆಮಾಡಿದರು

ಆ ದೇವತೆಗಳು ಸೆರೆಮನೆಯ ವಾಸದ ಕಷ್ಟವನ್ನು ನೆನೆದು ಕೊಂಡು ಈಗಲೂ ಆ ದೇಶಕ್ಕೆ ಬೇಕಾದಷ್ಟು ಮಳೆಯನ್ನು ತಪ್ಪದೇ ಕರೆಯುವರು.

ಆ ದೇಶದ ಪುಣ್ಯಶಾಲಿಗಳು ವಾಸಿಸುವ ಗ್ರಾಮಗಳೂ ರಾಜಧಾನಿಯೂ ಕುಬೇರನ ರಾಜಧಾನಿಯೊಡನೆ ಹೆಚ್ಚಾಗಿ ಸ್ಪರ್ಧೆಯನ್ನು ನಡೆಯಿಸುವಂತಿವೆ.

ಇಂತಹ ಉತ್ತಮವಾದ ಅನೇಕ ಸನ್ನಿವೇಶಗಳಿಂದ ಆ ದೇಶವು ಶ್ರೇಷ್ಠತರವಾದ ಸೌಂದರ್ಯವುಳ್ಳದ್ದು ಆಗಿದೆ. ಇದನ್ನು ನೋಡುತ್ತಾ ಅಲ್ಲಿ ನಿಲ್ಲದೆ ಹೊರಟುಹೋಗು.

ಆದೇಶದ ಗ್ರಾಮಗಳೂ ನಗರಗಳೂ ಒಂದೇರೀತಿಯಲ್ಲಿ ಏಳಿಗೆಯಲ್ಲಿವೆ.

ಟಿಪ್ಪಣಿ:––ಪೂರ್ವಕಥೆ––ಬಹು ಹಿಂದಿನಕಾಲದಲ್ಲಿ ಈ ದೇಶದ ರಾಜನೊಬ್ಬನು ಮಳೆಯ ಅಭಿಮಾನದೇವತೆಗಳನ್ನು ಹಿಡಿದು ಸೆರೆಹಾಕಿದ್ದನು. ಆ ಮೇಲೆ ಅವರಿಗೆ ಬಿಡುಗಡೆಯಾಯಿತು. ಅಂದಿನಿಂದ ಅಲ್ಲಿ ಮಳೆ ಕಾಲಕಾಲಕ್ಕೆ ಆಗುತ್ತಿದೆಯೆಂದು ಅಲ್ಲಿನ ಸ್ಥಳ ಪುರಾಣದಲ್ಲಿದೆ.

ಅಲ್ಲಿ ಮಳೆ ಚೆನ್ನಾಗಿ ಬೀಳುವುದರಿಂದ ದೇಶಕ್ಕೆ ಬೇಕಾದಷ್ಟು ಬೆಳೆಯಾಗುತ್ತದೆ. ಧನಸಂಪತ್ತು ಯಾವಾಗಲೂ ಪೂರ್ಣವಾಗಿದೆ.

ಅಯೋಧ್ಯೆಯಂತೆ, ಈ ದೇಶವೂ ಧನಧಾನ್ಯಸಂಪತ್ತಿನಿಂದಲೂ ಪುಣ್ಯಕೃತ್ತುಗಳಾದ ನಾಗರಕರಿಂದಲೂ (ಪಟ್ಟಣಿಗರು) ಯಾವಾಗಲೂ ತುಂಬಿತುಳುಕಾಡುತ್ತಿದೆ.

ಆ ದೇಶದ ಸೌಂದರ್ಯಕ್ಕೆ ಮರುಳಾಗಿ ಅಲ್ಲೇ ನಿಲ್ಲಬೇಡ, ನನ್ನ ಪ್ರಿಯಳಿಗೆ ಸಂದೇಶ ತಲಪಿಸಲು ಬೇಗ ಮುಂದಕ್ಕೆ ಹೊರಟುಹೋಗು.

### ಪದ್ಯ ೫೧.

ಮುಕ್ತಾಜಾಲೈರ್ಜನಿತಪುಳಿನಾಂ ಶುಕ್ತಿಸಂತಾನಮುಕ್ತೈಃ
ತಾರಾಪೂರ್ಣಾಂ ದಿವಮಿವ ತತಸ್ತಾಮ್ರಪರ್ಣೀಂ ಭಜೇಥಾಃ ।
ಪ್ರತ್ಯಾಸತ್ತ್ಯಾ ನಿಯತವಿಶದಂ ಪೀತಸಿಂಧೋರ್ಮಹರ್ಷೇಃ
ಪಾನೀಯಂ ತೇ ಪರಿಣಮಯಿತಾ ತತ್ರ ಮುಕ್ತಾಮಯತ್ವಂ ॥

ಆದಾದಮೇಲೆ, * ಮುತ್ತಿನಚಿಪ್ಪುಗಳಿಂದ ಹೊರಕ್ಕೆ ಬಂದ ಮುತ್ತುಗಳ ಗುಂಪುಗಳಿಂದ ‡ ರಚಿತವಾದ ದ್ವೀಪಗಳಿಂದ ಕೂಡಿರು

ವುದರಿಂದಲೇ, ನಕ್ಷತ್ರಗಳ ಗುಂಪುಗಳಿಂದ ಎಲ್ಲಾ ಕಡೆಯಲ್ಲಿಯೂ ವ್ಯಾಪ್ತವಾದ † ಆಕಾಶದಂತಿರುವ, ತಾಮ್ರಪರ್ಣೀನದಿಯನ್ನು ಸೇವಿಸು.

ಈ ನದಿಗೆ ಸಮೀಪದಲ್ಲಿ ಅಗಸ್ತ್ಯನಕ್ಷತ್ರವು ÷ ಕಾಣಿಸುವುದರಿಂದ ಸಹಜವಾಗಿ $ ನಿರ್ದೋಷವಾಗಿರುವ ನೀರು ನಿನಗೆ ಕುಡಿಯಲು ದೊರೆಯುವುದು. ಅದನ್ನು ನೀನು ಕುಡಿಯುವುದರಿಂದ ನಿನಗೆ + ದೇಹಾಯಾಸವು ತಪ್ಪುವುದು. × ಮುಕ್ತಿನಂತಾಗುವೆ. £ ಚಿನ್ಮಯಬ್ರಹ್ಮನಾಗುವೆ.

ಟಿಪ್ಪಣಿ:—* ಇದರಿಂದ ಮುಂಳಿನಂತೆ ಆಗಲು ತಕ್ಕ ಮುತ್ತುಗಳ ಅಪರಿಮಿತತ್ವವು ಸೂಚಿತವು.

‡ ಉಂಟಾದ.

† ಆಕಾಶದಲ್ಲಿ ಹೇಗೆ ನಕ್ಷತ್ರಗಳ ಸಮುದಾಯಗಳು ಅಸಂಖ್ಯಾತವಾಗಿವೆಯೋ ಹಾಗೆ ತಾಮ್ರಪರ್ಣೀನದಿಯಲ್ಲೂ ಮುತ್ತಿನರಾಶಿಗಳು ಲೆಕ್ಕವಿಲ್ಲದಷ್ಟಿವೆ.

÷ ಇರುವುದರಿಂದ.

$ ಪರಿಶುದ್ಧವಾಗಿರುವ.

+ ರೋಗಪರಿಹಾರವಾಗುವುದು.

× ಮುಕ್ತಾಗುವಿಕೆಯುಂಟಾಗುವುದು.

£ ಜ್ಞಾನಮಯನಾಗುವೆ.

## ಪದ್ಯ ೫೨.

ತಸ್ಯಾಸ್ಸ್ವೈರಂ ಸರಸಿಜಮುಖಾಸ್ವಾದಸಂಪ್ರೀತಚೇತಾಃ
ಶೀತೀಭೂತಸ್ತರಳಲಹರೀಬಾಹುಸಂಶ್ಲೇಷಣೇನ ।
ಅಧ್ಯಾಸೀನಃ ಪುಲಿನಮನಿಲೈರ್ವೀಜಿತಶ್ಚಂದನಾದ್ರೇಃ
ಶ್ರಾಂತಿಂ ಶಾಂತಿಂ ಗಮಯತು ಭವಾನ್ ಸಾಗರಂ ಲಂಘಯಿಷ್ಯನ್ ॥

ನೀನು * ತಡೆಯಿಲ್ಲದೆ ‡ ತಾಮ್ರಪರ್ಣೀನದಿಯ ಕಮಲವೆಂಬ ಮುಖದ ಚುಂಬನದಿಂದ ಚೆನ್ನಾಗಿ ಸಂತೋಷಪಡು. ಮಂದ

ಮಾರುತವು ಬೀಸುವುದರಿಂದ ಅಲೆಗಳೇಳುವುವು. ಈ ಚಂಚಲವಾದ ಅಲೆಗಳೆಂಬ ತೋಳುಗಳನ್ನು ಆಲಿಂಗಿಸಿಕೋ. ನದಿಯ ತಂಪಿನಿಂದ ಉತ್ತಮವಾದ ಸುಖವನ್ನು ಅನುಭವಿಸು. ಮಳಲಿನಮೇಲೆ ಕುಳಿತು ಕೊಳ್ಳು. ಮಲಯಪರ್ವತದಕಡೆಯಿಂದ ಬರುವ ಸುವಾಸನೆಯಗಾಳಿ ನಿನಗೆ ಬೀಸುವುದು. ಇದರಿಂದ ನೀನು ದಾರಿನಡೆಯುವುದರಿಂದಾದ † ಕಷ್ಟವನ್ನು ಹೋಗಲಾಡಿಸಿಕೋ. ಆ ಮೇಲೆ ಸಮುದ್ರವನ್ನು ದಾಟುವೆ.

ಟಿಪ್ಪಣಿ:—* ಭಯವಿಲ್ಲದೆ.
‡ ತಾಮ್ರಪರ್ಣಿಯೆಂಬ ಸುಂದರಿಯು.
† ಆಯಾಸವನ್ನು.

**ಪದ್ಯ ೫೩.**

ಸವ್ಯಂ ತಸ್ಯಾಃ ಕಿಯದಿವ ಗತಶ್ಶ್ಯಾಮತಾಳೀತಮಾಲಾಂ
ತ್ವತ್ಪ್ರಾಯಾಣಾಂ ತರುಣವಯಸಾಂ ಚೇತಸೋ ನಂದಯಿತ್ರೀಂ |
ವೇಲಾಮಬ್ಧೇರ್ವಿವಿಧಲಹರೀದತ್ತಮುಕ್ತಾಭಿರಾಮಾಂ
ದ್ರಕ್ಷ್ಯಸ್ಯಾರಾತ್ ದ್ವಿಗುಣಪುಲಿನಾಂ ಕೇತಕೀನಾಂ ಪರಾಗೈಃ ||

ಈ ಪದ್ಯದಲ್ಲಿ ಸಮುದ್ರತೀರವು ರಮಣೀಯವಾಗಿ ವರ್ಣಿತ ವಾಗಿದೆ:—

ಆ ನದಿಯ ಎಡಗಡೆತೀರದಲ್ಲಿ ಸ್ವಲ್ಪ ಮುಂದೆಹೋಗು. ಅಲ್ಲಿ ನಿನಗೆ ಸಮುದ್ರತೀರವು ಸಿಕ್ಕುವುದು. ಅದು ದಟ್ಟವಾದ ನೆಳಲುಳ್ಳ ಓಲೆಯ ಮರ ಮತ್ತು ಹೊಂಗೆಯಮರಗಳುಳ್ಳದ್ದು.

ನಿನಗೆ ಸಮನಾದ ಪ್ರಾಯವುಳ್ಳ ಪಕ್ಷಿಗಳ ಮನಸ್ಸನ್ನು ಸಂತೋಷಪಡಿಸುವುದು.

ನಾನಾವಿಧವಾದ ಅಲೆಗಳಿಂದ ಮೇಲಕ್ಕೆ ಬಂದ ಮುತ್ತು ಗಳಿಂದ ಕಣ್ಗೊಳಿಸುತ್ತಿರುವ, ಕೇದಗೆಯ ಹೂಗಳ ಧೂಳಿಗಳಿಂದ

ಇಮ್ಮಡಿಯಾದ ಮರಳುಳ್ಳ, ದಕ್ಷಿಣಸಮುದ್ರದ ತೀರವನ್ನು ಹತ್ತಿರ ದಲ್ಲೇ ನೋಡುವೆ.

‡ ಸಮುದ್ರವೇಲಾವೃತ್ತಾಂತದಿಂದ 'ಶ್ಯಾಮತಾಳೀತಮಾಲಾಂ' ಮೊದಲಾದ ವಿಶೇಷಣಗಳಿಂದ, ಯುವಜನಮನಸ್ಸನ್ನು ಸಂತೋಷಗೊಳಿಸುತ್ತಿರುವವಳಾಗಿಯೂ, ಗೆಳತಿಯರಿಂದ † ದತ್ತವಾದ ಮುತ್ತಿನಹಾರವುಳ್ಳವಳಾಗಿಯೂ ವಿಪುಲಜಘನವುಳ್ಳ ನೀಲವೇಣೀ ರಮಣಿಯ ವೃತ್ತಾಂತವು ತೋರಿಬರುವುದು.

ಟಿಪ್ಪಣಿ:—* ಹೆಚ್ಚಿದ, ಇಮ್ಮಡಿಸಲ್ಪಟ್ಟ.
‡ ತೀರ, ದಡ.
† ಕೊಡಲ್ಪಟ್ಟ.

### ಪದ್ಯ ೫೪.

ಸ್ಥಿತ್ವಾ ತತ್ರ ಕ್ಷಣಮುಭಯತಶ್ಚೈಲಶೃಂಗಾವತೀರ್ಣೈಃ
ಸ್ರೋತೋಭೇದೈರಧಿಗತಗುಣಂ ಚಾರುವಿಸ್ಫಾರಘೋಷೈಃ |
ಲಕ್ಷೀಕುರ್ವನ್ ದಶಮುಖಪುರೀಂ ಸೌಮ್ಯಪತ್ರಪ್ರಕೃಷ್ಟೋ
ವೇಲಾಚಾಪಾ ಶರ ಇವ ಸಖೇ ವೇಗತಸ್ತ್ವಂ ವ್ಯತೀಯಾಃ ||

ಸ್ನೇಹಿತನೇ, ಸಮುದ್ರದ ದಡದಲ್ಲಿ ಆಯಾಸಪರಿಹಾರಕ್ಕೋಸ್ಕರ ಸ್ವಲ್ಪಕಾಲನಿಂತು ಬಾಣದಂತೆ ಸಮುದ್ರವನ್ನು ಬೇಗದಾಟಿಹೋಗು. ಹಂಸವಾದ ನಿನಗೆ ಎರಡುಕಡೆಯಲ್ಲೂ ರೆಕ್ಕೆಗಳುಂಟು. ಎಂದರೆ:— ಬಾಣಕ್ಕೂ ನಿನಗೂ ವೇಗಹೆಚ್ಚಲು ಎರಡುಕಡೆಯೂ ಗರಿಗಳುಂಟು. ಸೌಮ್ಯನೇ, ವಾಹನಪಕ್ಷಿಗಳಲ್ಲೆಲ್ಲಾ ನೀನು ಉತ್ತಮನು.

ನೀನು ರಾವಣನಪಟ್ಟಣವಾದ ಲಂಕೆಯನ್ನು ಮುಖ್ಯವಾದ ಗುರಿಯೆಂದು ತಿಳಿ.

ನಿನ್ನ ಎರಡುಕಡೆಗಳಲ್ಲೂ ಇರುವ ಪರ್ವತಶಿಖರಗಳಿಂದ ಕೆಳಕ್ಕೆ ಬೀಳುತ್ತಿರುವ, ಧನುಸ್ಸಿನ ಧ್ವನಿಯಂತೆ ಕಿವಿಗಿಂಪಾಗಿರುವ ಧ್ವನಿ

ಯುಳ್ಳ ಪ್ರವಾಹಗಳಿವೆ. ಇವುಗಳೆಂಬ ಹೆದೆಯಿಂದ ಕೂಡಿರುವ, ಸಮುದ್ರತೀರವೆಂಬ ಧನುಸ್ಸಿನಿಂದ ವೇಗವಾಗಿ ಹೊರಟು ಸಾಗರವನ್ನು ದಾಟು.

ಟಿಪ್ಪಣಿ:—ಸಮುದ್ರದಡವೇ ಧನುಸ್ಸು ಪರ್ವತಶಿಖರಗಳಿಂದ ಬೀಳುವನದಿಗಳೇ ಹೆದೆ. ಹಂಸಪಕ್ಷಿಯೇ ಉತ್ತಮವಾದ ಗರಿಗಳಿಂದ ಕಟ್ಟಿದ ಬಾಣವು. ಇದು ಹೋಗಿ ತಾಗಬೇಕಾದಗುರಿಯು ರಾವಣನ ರಾಜಧಾನಿ. ಎಂದರೆ:—ಸೀತೆಯಿರುವ ಸ್ಥಳವನ್ನು ಪತ್ತೆಮಾಡುವುದೇ, ಧನುಸ್ಸಿನಿಂದಬಿಟ್ಟಬಾಣವು ಎಲ್ಲೂ ಸಿಲ್ಲದೆ ಮುಖ್ಯವಾದ ಗುರಿಯನ್ನೇ ಭೇದಿಸುವಂತೆ ನೀನು ಮೊದಲು ಸೀತೆಯಿರುವಸ್ಥಳವನ್ನು ಪತ್ತೆಮಾಡು. ನದಿಯು ಮೇಲಿನಿಂದಕೆಳಕ್ಕೆ ಬೀಳುವಾಗ ಆಗುವಸದ್ದೇ ಧನುಷ್ಟಂಕಾರವು.

### ಪದ್ಯ ೫೫.

ದಾವಾಸಕ್ತಂ ವನಮಿವ ನಭಸ್ಸಂಧ್ಯಯೇವಾನುವಿದ್ಧಂ
ಸಿಂದೂರಾಂಕಂ ದ್ವಿಪಮಿವ ಹರಿಂ ಸ್ವಾಂಬರೇಣೈವ ಜುಷ್ಟಂ |
ವಿದ್ಯುದ್ಭಿನ್ನಂ ಘನಮಿವ ಸಖೇ ವಿದ್ರುಮಾರಣ್ಯಯೋಗಾತ್
ದೇಹೇನೈಕಂ ಮಿಥುನಮಿವ ಚ ದ್ರಕ್ಷ್ಯಸಿ ತ್ವಂ ಪಯೋಧಿಂ ||

ಈ ಪದ್ಯದಲ್ಲಿ ಸಮುದ್ರವು ಮನೋಹರವಾಗಿ ವರ್ಣಿತವಾಗಿದೆ.

ಸಾಗರದಲ್ಲಿ ಹವಳದಬಳ್ಳಿಯವನಗಳು ಹೆಚ್ಚಾಗಿರುವುದರಿಂದ, ೧. ಅದನ್ನು ಬೆಂಕಿಯಿಂದ ಆವೃತವಾದ ಕಾಡನ್ನಾಗಿಯೂ, ೨. ಸಂಧ್ಯಾರಾಗದಿಂದ ಬೆರೆದು ಇರುವ ಆಕಾಶವನ್ನಾಗಿಯೂ, ೩. * ಸಿಂದೂರಬಳಿದಿರುವ ಆನೆಯನ್ನಾಗಿಯೂ, ೪. ಪೀತಾಂಬರ ಧರಿಸಿ ಶೋಭಿಸುತ್ತಿರುವ ಶ್ರೀಹರಿಯನ್ನಾಗಿಯೂ, ೫. ಮಿಂಚಿನಿಂದ ಕೂಡಿದ ಮೋಡವನ್ನಾಗಿಯೂ, ೬. ಹವಳದ ಬಳ್ಳಿಗಳಿಂದ ಕೂಡಿರುವ ಮುಖ್ಯವಾದ ಒಂದು ಭಾಗವಿರುವುದರಿಂದ, ಕೆಂಬಣ್ಣದ ಸ್ತ್ರೀದೇಹ, ಶ್ಯಾಮಲವರ್ಣದ ಪುರುಷದೇಹ ಇವುಗಳಿಂದ ಕೂಡಿದ ದಂಪತಿಯನ್ನಾಗಿಯೂ ನೀನು ಸಮುದ್ರವನ್ನು ನೋಡುವೆ.

ಟಿಪ್ಪಣಿ:—* ಚಂದ್ರ.

### ಪದ್ಯ ೫೬.

ಅಸ್ಮತ್ಪೂರ್ವೈಸ್ಸುರಪತಿಹೃತಂ ದ್ರಷ್ಟುಕಾಮೈಸ್ತುರಂಗಂ
ಭಿತ್ವಾ ಕ್ಷೋಣೀಮಗಣಿತಬಲೈಸ್ಸಾಗರೋ ವರ್ಧಿತಾತ್ಮಾ ।
ಸತ್ಕಾರಾರ್ಥಂ ತವ ಯದಿ ಗಿರೀನಾದಿಶೇತ್ ಗುಪ್ತಪಕ್ಷಾನ್
ಅಶ್ರಾಂತೋಽಪಿ ಪ್ರಣಯಮುಚಿತಂ ನೈವ ಬಂಧೋರ್ವಿಹನ್ಯಾಃ ॥

ಮಹಾಪರಾಕ್ರಮಿಗಳಾದ ನಮ್ಮ ಪೂರ್ವಿಕರು, ಇಂದ್ರನು ಕದ್ದುಕೊಂಡುಹೋದ, ಯಜ್ಞದ ಕುದುರೆಯನ್ನು ಹುಡುಕಿತರಲೇ ಬೇಕೆಂಬ ಕುತೂಹಲದಿಂದ ಭೂಮಿಯನ್ನು ಅಗೆದರು. ಇದರಿಂದ ಸಮುದ್ರವು ದೊಡ್ಡದಾಗಿ ಸಾಗರವೆಂಬ ಹೆಸರುಪಡೆಯಿತು.

ಈ ಸಮುದ್ರರಾಜನು, ಹಿಂದೆ ಹನುಮಂತನನ್ನು ಉಪಚರಿಸಿದಂತೆ, ನಿನ್ನನ್ನೂ ಆದರಿಸಬಹುದು. ಇದಕ್ಕೋಸ್ಕರ * ತನ್ನ ಸಹಾಯದಿಂದ ರೆಕ್ಕೆಗಳನ್ನು ಉಳಿಸಿಕೊಂಡ ಕೃತಜ್ಞತೆಯುಳ್ಳ ಪರ್ವತಗಳಿಗೆ, ‡ ಅವನು ಅಪ್ಪಣೆಮಾಡಿದರೆ, ನೀನು ಆಯಾಸಗೊಂಡಿರದಿದ್ದರೂ † ನೆಂಟನ ಯೋಗ್ಯವಾದ ÷ ಪ್ರೀತಿಯನ್ನು ಸ್ವಲ್ಪವೂ ಕೆಡಿಸಬೇಡ. (ತಿರಸ್ಕರಿಸದೆ ಉಪಚಾರವನ್ನು ಸ್ವೀಕರಿಸು.)

ಟಿಪ್ಪಣಿ:—* ಸಮುದ್ರನ.
‡ ಸಮುದ್ರರಾಜನು.
† ಸ್ನೇಹಿತನ.
÷ ನಂಬಿಕೆ.

### ಪದ್ಯ ೫೭.

ತತ್ರಾಸೀನಃ ಕ್ವಚನ ಸರಸಿ ಸ್ಮೇರಹೇಮಾರವಿಂದೇ
ಲಬ್ಧಾಸ್ವಾದೋ ಮಧುಭಿರಮಿತೈಸ್ಸಂವಿನೀತಾಧ್ವಖೇದಃ ।
ದ್ರಕ್ಷ್ಯಸ್ಯಗ್ರೇ ಲಘುತರಗತಿಶ್ಶೇಷಮುಲ್ಲಂಘ್ಯ ಸಿಂಧೋಃ
ತೋಯಾಘಾತಾತ್ ಮಸೃಣಿತಶಿಲಾರಮ್ಯವೇಲಂ ಸುವೇಲಂ ॥

ಅಲ್ಲಿ, ನಿನಗೆ ಉಪಚಾರಮಾಡಲು ಬಂದ ಪರ್ವತಗಳಲ್ಲಿ, ಅರಳುತ್ತಿರುವ ಹೊಂಬಣ್ಣದ ಕಮಲಗಳಿಂದ ಕೂಡಿದ ಯಾವುದಾದ ರೊಂದು ಸರೋವರದಲ್ಲಿ ಕುಳಿತುಕೊಂಡು, ಹೆಚ್ಚಾದ ಮಧುವುಳ್ಳ ಹೂಗಳಲ್ಲಿ ಜೇನನ್ನು ಕುಡಿ.

ಆಮೇಲೆ ಪ್ರಯಾಣದ ಕಷ್ಟವನ್ನು *ಕಡಿಮೆಮಾಡಿಕೋ. ಇನ್ನೂ ಹೆಚ್ಚು ವೇಗಗೊಂಡು ಸಮುದ್ರದಲ್ಲಿ ಪ್ರಯಾಣಮಾಡಬೇಕಾದ ಉಳಿದ ದಾರಿಯನ್ನು ದಾಟು. ಅಲ್ಲಿ ಅಲೆಗಳ ಹೊಡೆತದಿಂದ ಮೆತ್ತಗಾದ ಬಂಡೆಗಳಿಂದ ಸೊಗಸಾದ ದಡವುಳ್ಳ ಸುವೇಲಪರ್ವತವನ್ನು ಮುಂದೆ ನೋಡುವೆ.

ಟಿಪ್ಪಣಿ:—* ಪರಿಹಾರಮಾಡಿಕೋ.

### ಪದ್ಯ ೫೮.

ಯಸ್ಯಾಸನ್ನೇಪಯಸಿ ಜಲಧೇಸ್ತ್ವತ್ ಪ್ರತಿಚ್ಛಂದಚಂದ್ರಾಃ
ಪಕ್ಷಚ್ಛೇದಕ್ಷರಿತರುಧಿರಸ್ತೋಮಸಂದರ್ಶನೀಯಾಃ |
ವೀಚೀಪ್ರಾಪ್ತೈರ್ವಿಷಮಿತರುಚೋ ಮೌಕ್ತಿಕೈಸ್ತಾರಕಾಭೈಃ
ಸಂಧ್ಯಾಮನ್ಯಾಂ ನಿಯತಮುವನೌದರ್ಶಯನ್ತಿ ಪ್ರವಾಳಾಃ ||

ಸುವೇಲಪರ್ವತವು ಸಮುದ್ರದತೀರದಲ್ಲೇ ನೆಲೆಸಿದೆ. ಹಿಂದೆ ಇಂದ್ರನು ಇದರ ರೆಕ್ಕೆಗಳನ್ನು ಕತ್ತರಿಸಿದಾಗ ಬಿದ್ದ ರಕ್ತದ ಹನಿ ಗಳಿಂದ ಆ ಸಮುದ್ರದಲ್ಲಿರುವ ಹವಳಗಳು ಹೆಚ್ಚು ಕೆಂಬಣ್ಣವಾಗಿ ಮನೋಹರವಾದುವು. ಇಂತಹ ಹವಳಗಳಿಂದ ಕೆಂಪಾದ ನೀರು. ಅಲೆಗಳಿಂದ ಎಲ್ಲೆಲ್ಲೂ ಹರಡಿ ಸಂಧ್ಯಾಕಾಲದ ಆಕಾಶದಂತೆ ಕಾಣು ವುದು. ಅಲ್ಲಿರುವ *ಆಣೆಮುತ್ತುಗಳು ಮೇಲೆಕಂಡ ಹವಳಗಳ ಸಂಬಂಧದಿಂದ ಪಾಟಲವರ್ಣವಾಗಿ ಸಂಧ್ಯಾಕಾಲದ ನಕ್ಷತ್ರ ಗಳಂತಾಗುವುವು.

ಹಂಸವೇ, ನೀನು ಅಲ್ಲಿ ಹೋಗುವಾಗ ಸಮುದ್ರದ ಅಂಥ ನೀರಿನಲ್ಲಿ ಕಾಣಿಸುವ ಪ್ರತಿಬಿಂಬವೇ ಚಂದ್ರಸಂತೆ ಕಾಣುವುದು. ಎಂದರೆ:—ಅಲ್ಲಿನ ‡ ಉತ್ತಮವಾದ ಹವಳಗಳು ಸುಪ್ರಸಿದ್ಧವಾದ ಸಂಧ್ಯಾಕಾಲದ ಆಕಾಶದ ಸೊಗಸನ್ನು ನೆಲದಲ್ಲಿ ತೋರಿಸುತ್ತವೆ. ಇದೇ ಅಪೂರ್ವತೆ.

ಟಿಪ್ಪಣಿ:—* ತೋರಮುತ್ತುಗಳು.

‡ ಜಾಜ್ವಲ್ಯಮಾನವಾದ ಕಾಂತಿಯು. ಯಾವಾಗಲೂ ಸಂಧ್ಯಾಕಾಲದ ಸೊಗಸು ಆಕಾಶದಲ್ಲೇ ಕಾಣುವುದು. ಈಗ ಇಲ್ಲಿರುವ ಹವಳಗಳು ಲೋಕೋತ್ತರವಾದ ಮತ್ತೊಂದು ಸಂಧ್ಯಾಕಾಲದ ಸೊಗಸನ್ನು ಭೂಮಿಯಲ್ಲಿ ತೋರಿಸುತ್ತವೆ. ಇದೇ ಅಪೂರ್ವತೆ.

### ಪದ್ಯ ೫೯.

ಯತ್ರಾರಣ್ಯಂ ವರುಣವಸತೇರ್ವೀಚಿವೇಗಾಪನೀತೈಃ
ಮುಕ್ತಾರತ್ನಸ್ತಬಕಶಬಲೈರ್ವಿದ್ರುಮೈರುತ್ಪ್ರವಾಳಂ ।
ರಕ್ಷೋಭೀತೈಸ್ಸ್ವಯಮನಿಮಿಷೈರಾಹೃತಸ್ಥಾಪಿತಾನಾಂ
ಮಂದಾರಾಣಾಂ ಮಧುಪರಿಮಳೈರ್ವಾಸಿತಂ ಮೌಳಿದಘ್ನೈಃ ॥

ಸುವೇಲಪರ್ವತದಲ್ಲಿರುವ ಕಾಡು ಈ ಪದ್ಯದಲ್ಲಿ ಬಹಳ ಮನೋಹರವಾಗಿ ವರ್ಣಿತವಾಗಿದೆ:—

ಅದು, ಸಮುದ್ರದ ಅಲೆಗಳವೇಗದಿಂದ ಹೊರಕ್ಕೆ ಬಂದ ಮುತ್ತು ರತ್ನಗಳೆಂಬ ಹೂಗೊಂಚಲುಗಳಿಂದ ವಿಚಿತ್ರವರ್ಣವುಳ್ಳದ್ದಾಗಿಯೂ, ಹವಳಗಳಿಂದ ಪ್ರಕಾಶಮಾನವಾದ ಚಿಗುರುಗಳುಳ್ಳದ್ದಾಗಿಯೂ, ರಾವಣನ ದೆಸೆಯಿಂದ ಹೆದರಿದ ದೇವತೆಗಳು ಅವನು ಅಪ್ಪಣೆಮಾಡದಿದ್ದರೂ ತಾವೇ ಸ್ವರ್ಗಲೋಕದಿಂದ ತೆಗೆದುಕೊಂಡು ಬಂದು ಸುವೇಲಪರ್ವತದಲ್ಲಿ ಕಲ್ಪವೃಕ್ಷಗಳನ್ನು ನೆಟ್ಟಿರುವುದರಿಂದ

ಅವುಗಳ ಸರ್ವೋತ್ಕೃಷ್ಟವಾದ ಪುಷ್ಪರಸಗಳ ವಾಸನೆಯಿಂದ ಆ ಕಾಡು ಪರಿಮಳಿತವಾಗಿಯೂ ಇದೆ.

ಆ ಪರ್ವತದ ಕಾಡಿನಮರಗಳು ಸಮುದ್ರದ ಅಲೆಗಳಿಂದ ರಹೊಕ್ಕೆಬಂದ ಮುತ್ತು ರತ್ನಗಳೆಂಬ ಹೂಗೊಂಚಲುಗಳಿಂದ ವಿಚಿತ್ರ ವರ್ಣವಾಗಿದೆ.

ಮುತ್ತು ಪಚ್ಚೆ ಪದ್ಮರಾಗಾದಿಗಳೆಂಬ ಹೂಗೊಂಚಲುಗಳಿಂದ ಚಿತ್ರವರ್ಣವುಳ್ಳದ್ದಾಗಿದೆ.

ಹವಳಗಳೆಂಬ ಹೊಸ, ಮನೋಹರವಾದ ಚಿಗುರುಗಳುಳ್ಳದ್ದಾಗಿದೆ.

ರಾವಣನಿಂದ ಹೆದರಿದ ದೇವತೆಗಳು ತಾವೇ ತೆಗೆದುಕೊಂಡು ಬಂದು ನೆಟ್ಟಿರುವ ಕಲ್ಪವೃಕ್ಷಗಳ ಪುಷ್ಪರಸದ ಸುವಾಸನೆಯಿಂದ ಆ ಕಾಡು ಸೊಗಸಾದ ಪರಿಮಳವುಳ್ಳದ್ದೂ ಆಗಿದೆ.

ಟಿಪ್ಪಣಿ:—ಈ ಕಾಡು ಉತ್ತಮವಾದ ಮರಗಳಿಂದ ಕೂಡಿದೆ:—ಇಲ್ಲಿನ ಮರಗಳಲ್ಲಿ ಬಿಳಿಯ ಮುತ್ತು ಕೆಂಪುಬಣ್ಣದ ಹೂಗೊಂಚಲುಗಳೂ, ಹವಳದಂತೆ ಕೆಂಪಗಿರುವ ಚಿಗುರುಗಳೂ, ಸುವಾಸನೆಯಿಂದ ಕೂಡಿದ ಜೇನುತುಪ್ಪವೂ ಅಪರಿಮಿತವಾಗಿವೆ.

**ಪದ್ಯ ೬೦.**

ತಸ್ಮಿನ್ ದೃಶ್ಯಾ ತದನು ಭವತಶ್ಚಾರುಸೌಧಾವದಾತಾ
ಲಂಕಾ ಸಿಂಧೋರ್ಮಹತಿ ಪುಲಿನೇ ರಾಜಹಂಸೀವ ಲೀನಾ ।
ತ್ವಾಮಾಯಾಂತಂ ಪವನತರಳೈರ್ಯಾ ಪತಾಕಾಪದೇಶೈಃ
ಪಕ್ಷೈರಭ್ಯುಜ್ಜಿಗಮಿಷುರಿವ ಸ್ಥಾಸ್ಯತಿ ಶ್ರಾವ್ಯನಾದಾ ॥

ಸುವೇಲಪರ್ವತವನ್ನು ನೋಡಿದತರುವಾಯ ಅಲ್ಲಿ ನಿಂತಿರುವ ನೀನು ಲಂಕೆಯನ್ನು ನೋಡುವೆ:—

ಅದು, ಮನೋಹರವಾದ ಉಪ್ಪರಿಗೆಮನೆಗಳಿಂದ ಚೆನ್ನಾಗಿ ಹೊಳೆಯುತ್ತಿರುವುದು.

ಕಣ್ಗೊಳಿಸುವ ಸುಧೆಯು ಬಿಳುಪುವರ್ಣವುಳ್ಳದ್ದು.

ಆದುದರಿಂದಲೇ, ಅಗಲವಾದ ಎತ್ತರವಾದ ದ್ವೀಪದಲ್ಲಿ ಕುಳಿತಿರುವ ನಿನ್ನ ಪ್ರಿಯಳಾದ ರಾಜಹಂಸಿಯಂತಿರುವ ಲಂಕೆಯು, ನೋಡುವುದಕ್ಕೆ ಬಹು ಚೆನ್ನಾಗಿಕಾಣುವುದು.

ತ್ರಿಕೂಟಪರ್ವತಕ್ಕೆ ಸಮನಾಗಿ ಎತ್ತರವಾಗಿರುವ ಸುವೇಲ ಪರ್ವತದಮೇಲೆ ನಿಂತಿರುವ ನಿನಗೆ, ತ್ರಿಕೂಟದಮೇಲಿರುವ ನಗರಿಯು ಸ್ಪಷ್ಟವಾಗಿ ಕಾಣುವುದು.

ಅದು, ಕಿವಿಗೆ ಹಿತಕರವಾಗಿರುವ ನಾನಾವಿಧವಾದ ಹಾಡಿನ ಧ್ವನಿಗಳಿಂದಕೂಡಿದೆ.

ಕಿವಿಗಿಂಪಾಗಿ ಸುಖಾಗಮನ ಕೇಳುವುದಕ್ಕೆ ಯೋಗ್ಯವಾಗಿರುವ ಸಹಜವಾದ ಕೂಗಿನಿಂದ ಕೂಡಿರುವುದು.

ರಾಜಹಂಸಿಯೆಂದು ಊಹಿತವಾಗುವ ಲಂಕೆಯು, ದೂರದಿಂದ ಬರುವ ಪ್ರಿಯತಮನಾದ ನಿನ್ನನ್ನು, ಗಾಳಿಯಿಂದ ಚಲಿಸುತ್ತಿರುವ ಬಾವುಟಗಳೆಂಬ ರೆಕ್ಕೆಗಳಿಂದ ಇದಿರುಗೊಳ್ಳಲು ಅಪೇಕ್ಷೆ ಪಡುತ್ತಿರುವುದೆಂಬಂತೆ ಕಾಣುತ್ತಿರುವುದು.

ಟಿಪ್ಪಣಿ:--ಇಲ್ಲಿ ಮನೋಹರವಾದ ಎರಡು ಅರ್ಥಗಳು ಇವೆ. ಮೊದಲನೆಯದು ಲಂಕಾನಗರಿಯಪರವಾದುದು, ಎರಡನೆಯದು ರಾಜಹಂಸಿಯದು.

**ಕರ್ಣಾಟಕ ಹಂಸಸಂದೇಶದಲ್ಲಿ ಮೊದಲನೆಯ**
**ಆಶ್ವಾಸವು ಮುಗಿಯಿತು.**



॥ ಶ್ರೀಃ ॥

# ಎರಡನೆಯ ಆಶ್ವಾಸವು.

ಪಾರಾವಾರಪಯೋವಿಶೋಷಣ ಕಲಾಪಾರೀಣ ಕಾಲಾನಲ ।
ಜ್ವಾಲಾಜಾಲವಿಹಾರಹಾರಿ ವಿಶಿಖವ್ಯಾಪಾರಘೋರಕ್ರಮಃ ॥
ಸರ್ವಾವಸ್ಥಸಕೃತ್ ಪ್ರಪನ್ನಜನತಾಸಂರಕ್ಷಣೈಕವ್ರತೀ ।
ಧರ್ಮೋವಿಗ್ರಹವಾನಧರ್ಮವಿರತಿಂ ಧನ್ವೀಸತನ್ವೀತುನಃ ॥

**ಪದ್ಯ ೧.**

**ಲೀಲಾಖೇಲಂ ಲಲಿತಗಮನಾಶ್ಚಾರುನಾದಂ ಸಶಿಂಜಾಃ**
**ಭಲ್ಲಾಕ್ಷಂ ತ್ವಾಂ ಸ್ಮರಶರದೃಶೋ ಗೌರಮಾಪಾಂಡುರಾಂಗಾಃ ।**
**ಮುಗ್ಧಾಲಾಪಂ ಮಧುರವಚಸೋ ಮಾನಸಾರ್ಹಂ ಮನೋಜ್ಞಾಃ**
**ಯತ್ರಾನೀತಾಸ್ಸುರಯುವತಯೋ ರಂಜಯೇಯುಸ್ಸಮಕ್ಷಂ ॥**

ಹಂಸವೇ, *ನಿನ್ನಂತೆ ಅವರು ನಡಿಗೆಯುಳ್ಳವರು. ನಿನ್ನ ಕೂಗು ಕಿವಿಗಿಂಪಾಗಿರುವಂತೆ, ಅವರು ಧರಿಸಿರುವ ಆಭರಣಗಳ ಅಲುಗುವಿಕೆಯಿಂದಾಗುವ ಧ್ವನಿಯೂ ಇಂಪಾಗಿರುವುದು.

‡ ಅರವಿಂದಗಳಂತೆ ಸುಂದರನಯನೆಯರು. ಮನೋಹರವಾದ ಬಾಣಗಳಂತೆ ಕಣ್ಣುಳ್ಳವನು.

ವಿರಹಾತಿಶಯದಿಂದ ಬೆಳ್ಳಗಾಗಿರುವರು. ನೀನು ಸಹಜವಾಗಿಯೇ ಬೆಳ್ಳಗೆಯಿದ್ದೀಯೆ. ಕಿವಿಗಿಂಪಾಗಿರುವಂತೆ ಮಾತನಾಡತಕ್ಕವರು. ನೀನು ಮನೋಹರವಾದ ಪ್ರಿಯರ † ಉಕ್ತಿಗಳನ್ನು ಹೇಳತಕ್ಕವನು.

ರೂಪಲಾವಣ್ಯವುಳ್ಳವರು ಚಾತುರ್ಯವತಿಯರು. ಇತರರ ÷ ಮನಸ್ಸನ್ನು ತಿಳಿಯಬಲ್ಲವನು. ರಾವಣನಿಂದ ಅಪಹೃತರಾದ ದೇವ

ಸ್ತ್ರೀಯರು ಸೆರೆಯಲ್ಲಿರುವ ಲಂಕೆಗೆ, ನೀನು ಬಂದಿರುವುದರಿಂದ ಅವರು ನಿನ್ನನ್ನು ಚೆನ್ನಾಗಿ ಪ್ರೀತಿಸುವರು.

ಟಿಪ್ಪಣಿ:—* ಹಂಸಯಾನೆಯರು.

‡ ಕಾಮಬಾಣಗಳಂತೆ ಆಕರ್ಷಕವಾದ ಕಣ್ಣುಳ್ಳವರು.

† ಸಂದೇಶಗಳನ್ನು.

÷ ಮಾನಸಸರೋವರದಲ್ಲಿ ವಾಸಿಸಲು ಅರ್ಹನಾದವನು.

ಸೆರೆಯಾಗಿರುವ ದೇವಸ್ತ್ರೀಯರ ಮತ್ತು ರಾಜಹಂಸದ ಸಮಾನಗುಣಗಳು (ಧರ್ಮ) ಇಲ್ಲಿ ಅಂದವಾಗಿ ಚಿತ್ರಿಸಲ್ಪಟ್ಟಿವೆ.

## ಪದ್ಯ ೨.

ಉಗ್ರೈಶ್ಶಾಪೈರುಪಹತಿಭಿಯಾ ರಕ್ಷಸಾ ದೂರಮುಕ್ತಾಃ
ದಗ್ಧುಂ ಯೋಗ್ಯಾ ಹುತವಹಮಪಿ ತ್ವತ್ ಪ್ರಿಯಾವರ್ಣಶುದ್ಧಾಃ |
ಉತ್ಪಶ್ಯಂತೋ ಜನಕತನಯಾತೇಜಸೈವ ಸ್ವರಕ್ಷಾಂ
ರೋಧಂ ಯಸ್ಯಾಮನುವಿದಧತೇ ಲೋಕಪಾಲಾವರೋಧಾಃ ||

ಬ್ರಹ್ಮನೂ, ನಳಕೂಬರರೂ, ರಾವಣನಿಗೆ ಭಯಂಕರವಾದ ಶಾಪಕೊಟ್ಟಿರುತ್ತಾರೆ:—

ಇವರಿಂದ ತನಗೆ ನಾಶವು ತಪ್ಪದೆಂದು ಹೆದರಿ, ಲೋಕಪಾಲಕರ ಪತ್ನಿಯರನ್ನು ಮುಟ್ಟುವುದಕ್ಕೂ ಅಂಜಿ ಅವರ ಗೋಜಿಗೆ ರಾವಣನು ಹೋಗದೇ ಇದ್ದಾನೆ.

ಅವರು ತಮ್ಮ ಪತಿವ್ರತಾಧರ್ಮದಿಂದ ಅಗ್ನಿಯನ್ನೂ * ಸುಡಬಲ್ಲರು. ನಿನ್ನ ಪ್ರಿಯಳು ಬಹಳ ಸೊಗಸಾದ ಬಿಳಿಯಬಣ್ಣದಿಂದ ಮನೋಹರಳು. ಇವರೂ ಪಾತಿವ್ರತ್ಯದ ಮಹಿಮೆಯಿಂದ ನಿನ್ನ ಪ್ರಿಯಳ ವರ್ಣದಂತೆ ಶುದ್ಧರು.

ಸೀತೆಯ ಮಹಿಮೆಯಿಂದಲೇ ತಮ್ಮ ¦ ಪಾತಿವ್ರತ್ಯವನ್ನು ಉಳಿಸಿಕೊಂಡಿರುವರು. ತಮಗೆ ಬಿಡುಗಡೆಯಾಗಿ ತಮ್ಮ ಪ್ರಿಯ

ಕೊಡನೆ ಪುನಃ ಸೇರಿ ಬದುಕಬಹುದೆಂಬ ಊಹೆಯುಳ್ಳ ಲೋಕಪಾಲಕರ ಲಲನೆಯರು ರಾವಣನ ರಾಜಧಾನಿಯಲ್ಲಿ ಸೆರೆಯಲ್ಲಿದ್ದು ಕಷ್ಟವನ್ನು ಅನುಭವಿಸುತ್ತಾರೆ.

ಟಿಪ್ಪಣಿ:—* ತೊಂದರೆಗೊಳಿಸಬಲ್ಲರು.
‡ ಸದ್ಗುಣಗಳನ್ನು.

**ಪದ್ಯ ೩.**

ಅಧ್ಯಾಸೀನಾ ಬಹುಮಣಿಮಯಂ ತುಂಗಶೃಂಗಂ ತ್ರಿಕೂಟಂ
ದಿಕ್ಪಾಲೇಷು ಪ್ರಥಿತಯಶಸಾ ರಕ್ಷಸಾ ರಕ್ಷ್ಯಮಾಣಾ ।
ಅಗ್ರೇ ಮೇರೋರಮರನಗರೀಂ ಯಾ ಪರಿಷ್ಕಾರಭೂಮ್ನಾ
ತ್ವಾಹೂಯೇವ ಧ್ವಜಪಟಮಯಾನ್ ಅಗ್ರಹಸ್ತಾನ್ ಧುನೋತಿ ॥

ಈ ಪದ್ಯದಲ್ಲಿ ತ್ರಿಕೂಟಪರ್ವತದ ಮೇಲಿರುವ ಲಂಕಾನಗರಿಯು ರಮ್ಯವಾಗಿ ವರ್ಣಿತವಾಗಿದೆ:—

ಈ ಪರ್ವತವು ಅಸಂಖ್ಯಾತ ರತ್ನಗಳಿಂದ ಕೂಡಿ ಎತ್ತರವಾದ ಶಿಖರಗಳುಳ್ಳದ್ದು. ಇದರಮೇಲೆ ರಾವಣನ ರಾಜಧಾನಿಯುಡೆ. ದಿಕ್ಪಾಲಕರಿಗೆ ಸಮನಾದ ಕೀರ್ತಿಯುಳ್ಳ ಅವನಿಂದ ಆ ನಗರಿಯು ರಕ್ಷಿತವಾಗುತ್ತಲಿದೆ.

ಮೇರುಪರ್ವತದಮೇಲಿರುವ ಇಂದ್ರನ ರಾಜಧಾನಿ ಅಮರಾವತಿಯನ್ನು, ಬಹುವಿಧವಾಗಿ ಅಲಂಕೃತವಾದ ಲಂಕಾಪುರಿಯು *ಸ್ಪರ್ಧೆಯಿಂದ ಕರೆದು, ಬಾವುಟಗಳೆಂಬ ಕೈತುದಿಗಳನ್ನು ಹೆಮ್ಮೆಯಿಂದ ಅಮರನಗರಿಯನ್ನು ಅಲ್ಲಗಳೆಯುವುದಕ್ಕಾಗಿ ಅಲುಗಾಡಿಸುತ್ತಿದೆಯೋ ಎಂಬಂತೆ, ಇದೆ.

ಟಿಪ್ಪಣಿ:—* ಹುರುಡಿನಿಂದ.

## ಪದ್ಯ ೪.

ಕಾಲೇ ಯಸ್ಯಾಂ ವ್ಯಪಗತಘನೇ ತ್ವದ್ವಿಹಾರೋಚಿತೇಽಸ್ಮಿನ್
ಚಂದ್ರಾಲೋಕೈರ್ವಿಲುಲಿತಧಿಯಾಂ ಶರ್ವರೀಗರ್ವಹಾಸ್ಯೈಃ |
ಸ್ವರ್ಗಸ್ತ್ರೀಣಾಂ ವಿರಹಜನಿತಂ ಬಾಷ್ಪಮುದ್ವೇಲಯಂತ್ಯಃ
ನಿಷ್ಯಂದಂತೇ ಸಲಿಲಕಣಿಕಾಶ್ಚಂದ್ರಕಾಂತಸ್ಥಲೀನಾಂ ||

ರಾಜಹಂಸವೇ, ಈಗ ನೀನು ಲಂಕೆಗೆ ಹೋಗುತ್ತೀಯೆ. ಅಲ್ಲಿ ನಿನಗೆ ಹಿತಕರವಾದ ಶರತ್ಸಮಯವಿದೆ.

ಎಲ್ಲ ಕ್ರೀಡಾಸೌಕರ್ಯಗಳೂ ಹಿತಕರವಾಗಿವೆ. ಅಲ್ಲಿನ ಉತ್ತಮವಾದ ಬೆಳುದಿಂಗಳು ರಜನಿಯೆಂಬ ಪ್ರೌಢಸ್ತ್ರೀಯ ಅಹಂಕಾರದಿಂದ ಕೂಡಿದ ನಗೆಯಂತಿದೆ. * ಇದರಿಂದ ನೊಂದ ದೇವತಾಸ್ತ್ರೀಯರು ತಮ್ಮ ವಿರಹದಿಂದ ಕಣ್ಣೀರನ್ನು ಸುರಿಸುವರು. ಅಲ್ಲಿರುವ ಚಂದ್ರಕಾಂತಶಿಲೆಯ ನೆಲಗಟ್ಟುಗಳಿಂದ ಹೊರಡುವ ನೀರಿನ ಹನಿಗಳು ಆ ಕಣ್ಣೀರನ್ನು ‡ ದಡಮೀರಿ ಹರಿಯುವಂತೆ ಮಾಡುತ್ತವೆ. ಇಂತಹ ಲಂಕೆಯನ್ನು ನೀನು ನೋಡುವೆ.

ಟಿಪ್ಪಣಿ:—* ಇಂಥ ಬೆಳುದಿಂಗಳಿಂದ.
‡ ಮಿತಿಮೀರಿ.

## ಪದ್ಯ ೫.

ಭಾಸಾ ತಾಮ್ರಕ್ ಪರಿಣತಿಜುಷಾ ಮೈಥಿಲೀಶೋಕವಹ್ನೇಃ
ಭಸ್ಮೀಭೂತಾಂ ಪವನತನಯಸ್ನೇಹಿನಾ ಪಾವಕೇನ |
ಅಂತಸ್ತ್ರಾಸಾತ್ ಅವಹಿತಧಿಯಸ್ಸಂವಿಧಾಸ್ಯಂತ್ಯವಶ್ಯಂ
ಪ್ರತ್ಯಾದಿಷ್ಟಪ್ರಥಮರಚನಾಂ ವಿಶ್ವಕರ್ಮಾದಯಸ್ತಾಂ ||

ಬೆಂಕಿಯಂತೆ ಸುಡುವ ಶಕ್ತಿಯನ್ನು ಪೂರ್ಣವಾಗಿ ಪಡೆದಿರುವ, ಸೀತೆಯ ಶೋಕಾಗ್ನಿಯ ತೇಜಸ್ಸಿನಿಂದ ಅರೀತಿ ಬಲಗೊಂಡ ಪವನ

ತನಯುನಿಗೆ ಸಹಾಯಕನಾದ ಬೆಂಕಿಯಿಂದ ಲಂಕೆಯು ಸುಟ್ಟು ಹೋಯಿತು.

ಇಂತಹ ರಾಜಧಾನಿಯುನ್ನು ವಿಶ್ವಕರ್ಮನು ಮೊದಲಾದ ಶಿಲ್ಪಿಗಳು ರಾವಣನಿಗೆ ಬಹುವಾಗಿ ಹೆದರಿ ಬಹಳ ಜಾಗರೂಕರಾಗಿ ಮೊದಲಿಗಿಂತ ಸರ್ವೋತ್ಕೃಷ್ಟವಾದ ಶಿಲ್ಪಚಾತುರ್ಯವುಳ್ಳದ್ದನ್ನಾಗಿ ತಪ್ಪದೇ ಉತ್ತಮಸ್ಥಿತಿಗೆ ತರುವರು.

ಟಿಪ್ಪಣಿ:—ಸೀತೆಯ ದುಃಖವೆಂಬ ಅಗ್ನಿಯ ಮಹಿಮೆಯಿಂದ ಅಭಿವೃದ್ಧಿ ಹೊಂದಿದ್ದರಿಂದಲೇ ಪವನತನಯುನ ವಾಲಾಗ್ನಿಗೆ ಹೀಗೆ ಸುಡುವಶಕ್ತಿಯು ಬಂದಿತು. ಬೇರೆಯಾವ ಕಾರಣದಿಂದಲೂ ಅಲ್ಲ.

## ಪದ್ಯ ೬.

ಮಧ್ಯೇ ತಸ್ಯಾ ನಿಶಿಚರಪತೇಸ್ಸದ್ಮ ರುದ್ಧಾಂತರಿಕ್ಷಂ
ಯುಗ್ಮಂ ನೇಯೈರ್ದಿವಿ ಸುಮನಸಾಂ ಸೇವ್ಯಮಾನಂ ವಿಮಾನೈಃ ।
ಕಾರಾಗಾರಂ ವಿಬುಧಸುದೃಶಾಂ ವೀಕ್ಷಮಾಣೋ ವಿಚಿತ್ರಂ
ಶೋಕಪ್ರೀತಿವ್ಯತಿಕರವತೀಂ ವಕ್ಷ್ಯಸೇ ಚಿತ್ತವೃತ್ತಿಂ ।

ಲಂಕೆಯ ಮಧ್ಯಭಾಗದಲ್ಲಿ ದೇವತಾಸ್ತ್ರೀಯರ ಕಾರಾಗೃಹವಾದ ರಾವಣನ ಅರಮನೆಯಿದೆ:—

ಅದರ ಮೇಲುಭಾಗದಲ್ಲಿ ಅನೇಕ ದೇವವಿಮಾನಗಳು ಹಾರಾಡುತ್ತಲಿವೆ. ಇವುಗಳು ಬಂಧನದಲ್ಲಿರುವ ದೇವತಾ ದಂಪತಿಗಳನ್ನು ಸ್ವಸ್ಥಳಕ್ಕೆ ಕರೆದುಕೊಂಡು ಹೋಗಲು ಬಂದಿವೆ. ಅಷ್ಟೇ ಅಲ್ಲದೆ ಆ ಸೆರೆಮನೆಯನ್ನು ರಕ್ಷಿಸುತ್ತಲಿವೆ. ಇಂಥ ದೇವತಾರಮಣಿಯರ ಬಂಧನಾಗಾರವನ್ನು ನೋಡು.

ಮಾತುಗಳಿಂದ ವರ್ಣಿಸಿ ತಿಳಿಯಹೇಳುವುದಕ್ಕೂ, ಮನಸ್ಸಿನಿಂದ ಊಹಿಸಿ ತಿಳಿಯುವುದಕ್ಕೂ ಆಗದ, ಆಶ್ಚರ್ಯವನ್ನುಂಟು ಮಾಡುವ ರಾವಣನ ನಾನಾರತ್ನಖಚಿತವಾದ ಅರಮನೆಯುನ್ನು

ಚೆನ್ನಾಗಿನೋಡು. ಇದರಿಂದ ನಿನ್ನಮನಸ್ಸು ದುಃಖವನ್ನೂ ಹರ್ಷ ವನ್ನೂ ಅನುಭವಿಸುವುದು.

ಹೀಗೆ ರಾವಣನ ಅರಮನೆಯಲ್ಲಿ ದೇವತಾಸ್ತ್ರೀಯರು ಸೆರೆ ಯಾಗಿರುವುದನ್ನು ನೋಡುವುದರಿಂದ ಶೋಕವೂ ಆಶ್ಚರ್ಯಗೊಳಿಸುವ ಸಂಪತ್ತನ್ನು ನೋಡುವುದರಿಂದ ಹರ್ಷವೂ ಆಗುತ್ತದೆ.

ಹನುಮಂತನು ಲಂಕೆಯನ್ನು ಪ್ರವೇಶಿಸಿದಮೇಲೆ ರಾವಣನಿಗೆ ಬಹುಬೇಗ ಮರಣವಾಗುವುದೆಂದು ನಿಶ್ಚಯಿಸಿ ಮುಂದೆ ಅವನ ಸಾವು ಸಂಭವಿಸಿದಕೂಡಲೇ ಲಂಕೆಯಲ್ಲಿ ಅವನಿಂದ ಸೆರೆಯಾಗಿರುವ ತಮ್ಮ ಅಂತಃಪುರದ ಸ್ತ್ರೀಯರೊಡನೆ ಸೇರಿ ಸ್ವರ್ಗಲೋಕಕ್ಕೆ ಹೊರ ಡಲು ಕುತೂಹಲವುಳ್ಳ ದೇವತೆಗಳು ಇಟ್ಟಿರುವ ವಿಮಾನಗಳು ಆ ಸೆರೆಮನೆಯನ್ನು ಸುತ್ತಲೂ ರಕ್ಷಿಸುತ್ತಲಿವೆ.

ಟಿಪ್ಪಣಿ:—ಇಂದ್ರಾದಿ ದೇವದಂಪತಿಗಳನ್ನು ಕರೆದುಕೊಂಡುಹೋಗಲು ತಕ್ಕವಾದ.

ದೇವದಂಪತಿಗಳ ಸ್ವೇಚ್ಛೆಯಾದ ಸ್ವರ್ಗದ ವಿಹಾರಕ್ಕೆ ಅನುಕೂಲವಾದದ್ದೆಂದು ಸೂಚಿಸುವುದರಿಂದ ಅವುಗಳಲ್ಲಿ ದೇವತೆಗಳಿಗೆ ಬಹುವಾದ ಪ್ರೀತಿಯಿರುವುದೂ ಮತ್ತೊಬ್ಬರು ಉಪಯೋಗಿಸುವುದಕ್ಕೆ ಆಗಬಾರದೆಂದೂ ತೋರಿಬರುವುದು.

ಈರೀತಿ ಇಂದ್ರ ಮೊದಲಾದ ದೇವದಂಪತಿಗಳನ್ನು ಮಾತ್ರ ಕುಳ್ಳಿರಿಸಿಕೊಂಡು ಹೋಗಲು ಯೋಗ್ಯವಾಗಿದ್ದುವು, ಈಗ ಮಹಾಪ್ರತಾಪಶಾಲಿಯಾದ ರಾವಣನ ಹೆದರಿಕೆಯಿಂದ ದೇವತೆಗಳ ಇಚ್ಛೆಯಿಂದಲೇ ಅವರಿಂದಲೇ ರಾಕ್ಷಸದಂಪತಿಗಳನ್ನು ಕೂಡಿಸಿಕೊಂಡು ಹೋಗಲು ಅವರು ಹೊರಡುವ ಕಾಲಸರೀಕ್ಷಣೆಯಿಂದ ಹೊರಗಡೆ ಸಿದ್ಧಪಡಿಸಿಟ್ಟಿರುವ ಆಕಾಶಯಾನಗಳಿಂದ ಸೇವಿತವಾಗುವ ಅರಮನೆಯೆಂದು ಸ್ಪಷ್ಟ ವಾಗುವುದು.

ಹೀಗೆ, ದೇವದಂಪತಿಗಳನ್ನು ಗೊತ್ತಾದ ಸ್ಥಳಗಳಿಗೆ ಕರೆದುಕೊಂಡುಹೋಗಲು ತಕ್ಕವುಗಳಾದ ದೇವವಿಮಾನಗಳಿಂದ ಆಕಾಶದಲ್ಲಿ ಸೇವಿತವಾಗುತ್ತಿರುವ,

ರಾವಣನಿಗೆ ಕಾಣಿಕೆಕೊಡುವ ಸಂದರ್ಭದಲ್ಲಿ ದೇವದಂಪತಿಗಳನ್ನು ಕುಳ್ಳಿರಿಸಿ ಕೊಂಡು ಜಾಗರೂಕತೆಯಿಂದ ಹೋಗುವ ವಿಮಾನಗಳಿಂದ.

**ಪದ್ಯ ೭.**

ಈಷತ್ಕೋಪಾತ್ ಚಕಿತಪವನಾಮಿಂದುಸಂದಿಗ್ಧಸೂರ್ಯಾಂ
ನಿತ್ಯೋದಾರಾಮೃತುಭಿರಖಿಲೈರ್ನಿಷ್ಕುಟೀಂ ವೃಕ್ಷವಾಟೀಂ ।
ಸೀತಾಶೋಕಜ್ವಲನಸಹಜೈಸ್ತತ್ರ ದೀಪ್ತಾಮಶೋಕೈಃ
ಆಪದ್ಯೇಥಾಃ ಪ್ರಥಮಲುಲಿತಾಮಾಂಜನೇಯಪ್ರಚಾರೈಃ ॥

ರಾವಣನ ಉದ್ಯಾನವನದಲ್ಲಿ ವಾಯುದೇವನು ಅವನಿಗೆ ಹೆದರಿ ಮೆಲ್ಲಗೆ ಬೀಸುತ್ತಾನೆ. ಸೂರ್ಯನು ಹೆಚ್ಚು ಬಿಸಿಲನ್ನು ಬೀಳಿಸದೆ ಚಂದ್ರನಂತೆ ಕಾಣುತ್ತಾನೆ. ಆರು ಋತುಗಳಲ್ಲೂ ಬೇರೆಬೇರೆಯಾಗಿ ಕಾಣುವ ಚಿಗುರು ಹೂ ಹಣ್ಣು ಮುಂತಾದವುಗಳು ಎಲ್ಲ ಕಾಲಗಳಲ್ಲೂ ಇವೆ. ವಂಜುಲವೃಕ್ಷಗಳು ತಮ್ಮ ಕೆಂಬಣ್ಣದ ಹೂಗೊಂಚಲುಗಳಿಂದ ಸೀತೆಯ ದುಃಖಾಗ್ನಿಗಳಂತೆ ಕಂಗೊಳಿಸುತ್ತಿವೆ. ಇಂತಹ ಉಪವನವು ಹನುಮಂತನಿಂದಲೇ ಮೊದಲು ತೊಂದರೆಗೆ ಸಿಕ್ಕಿಕೊಂಡಿತು. ಇಂಥ ತೋಪನ್ನು ನೀನು ಧೈರ್ಯವಾಗಿ ಪ್ರವೇಶಿಸು.

ಟಿಪ್ಪಣಿ:—ವಾಯು ಸೂರ್ಯ ಮುಂತಾದವರೂ ಅಲ್ಲಿ ತಮ್ಮ ಒರಟುತನವನ್ನು ತೋರಿಸಲಾರರು. ವನದ ಸೌಂದರ್ಯವು ಅತ್ಯುತ್ತಮವಾದುದು.

**ಪದ್ಯ ೮.**

ತಸ್ಯಾಮನ್ಯೈರ್ವಿಯತಿ ವಿಹಗೈಸ್ಸಾರ್ಧಮಾನಂದನಿಘ್ನೈಃ
ಸ್ಥಾನೇ ಸ್ಥಾನೇ ನಿಹಿತನಯನೋ ವರ್ತಯನ್ ಮಂಡಲಾನಿ ।
ದ್ರಕ್ಷ್ಯಸ್ಯೇಕಾಂ ಜನಕದುಹಿತುಸ್ಸೌಮ್ಯ ದುರ್ಜಾತಬಂಧುಂ
ನ್ಯಸ್ತಾಕಲ್ಪಾಂ ಕ್ವಚನ ವಿಟಪೇ ಶಿಂಶುಪಾಂ ಸಾಂದ್ರಶಾಖಾಂ ॥

ಎಲೈ ಶಾಂತಸ್ವಭಾವದವನೇ, ನೀನು ಅಲ್ಲಿಗೆ ಹೋದುದರಿಂದ ನಿನ್ನನ್ನು ನೋಡಿ ಬಹಳ ಸಂತೋಷಪಟ್ಟ ಇತರ ಪಕ್ಷಿಗಳೊಡನೆ ಆಕಾಶದಲ್ಲಿ ನೀನೂ ಗುಂಡಗೆ ತಿರುಗು. ಪ್ರತಿಯೊಂದು ಸ್ಥಳವನ್ನೂ

ಕಣ್ಣಿಟ್ಟು ನೋಡು. ಸೀತೆಯು ದುಃಖಕಾಲದಲ್ಲಿ ಅವಳನ್ನು ಬಂಧುವಿನಂತೆ ಸಮಾಧಾನಪಡಿಸುವುದಕ್ಕೆ ಯೋಗ್ಯವಾದ ಯಾವುದೋ ಒಂದು ಮರದ ಕೊಂಬೆಯಲ್ಲಿ ಅವಳು ಆಭರಣಗಳನ್ನು ಇಟ್ಟಿದ್ದಾಳೆ. ಚಿಗುರು ಎಲೆಗಳಿಂದ ದಟ್ಟವಾಗಿರುವ ಆ ಶಿಂಶುಪಾವೃಕ್ಷವನ್ನು ನೋಡುವೆ.

ಟಿಪ್ಪಣಿ:—ಇಲ್ಲಿ ಪಕ್ಷಿಗಳ ಸ್ವಭಾವವು ವರ್ಣಿತವಾಗಿದೆ. ಹಂಸವು ಬಹು ಜಾಗರೂಕವಾಗಿರಬೇಕೆಂದೂ ಸೂಚಿಸಿದೆ.

## ಪದ್ಯ ೯.

ಮೂಲೇ ತಸ್ಯಾಃ ಕಿಮಪಿ ಪವನಕ್ಷೇತ್ರಸಂಸ್ಕಾರಜಾತಂ
ಯತ್ರ ಕ್ವಾಪಿ ಸ್ಥಿತಮಪಿ ಸಹೇ ತ್ರಾಸಹೀನಂ ಮಹಿಮ್ನಾ ।
ಕಾಲೇ ತಸ್ಮಿನ್ ಕಥಮಪಿ ಮಯಾ ವೀರ್ಯಶುಲ್ಕೇನ ಲಬ್ಧಂ
ದೃಶ್ಯಂ ತತ್ರೇ ದಿನಕರಕುಲದ್ಯೋತಕಂ ದಿವ್ಯರತ್ನಂ ॥

ಸ್ನೇಹಿತನೇ, ಯಜ್ಞಭೂಮಿಯನ್ನು ನೇಗಿಲಿನಿಂದ ಉಳುವಾಗ ಅವತರಿಸಿದ,

ಗಣಿಯೆಲ್ಲವನ್ನೂ ಹುಡುಕಿದವರಿಂದ ಸಿಕ್ಕದ,

ಎಲ್ಲೋ, ರಾಕ್ಷಸರೇ ಮೊದಲಾದ ಕ್ರೂರಾತ್ಮರ ವಾಸಸ್ಥಳದಲ್ಲಿದ್ದರೂ, ಪಾತಿವ್ರತ್ಯವೇ ಮೊದಲಾದ ತನ್ನ ಪ್ರಭಾವದಿಂದಲೇ ನಿರ್ಭಯವಾಗಿರುವ,

ರತ್ನಪರೀಕ್ಷೆಮಾಡಲು ಸ್ವಲ್ಪವೂ ತಿಳಿಯದ ಜನಗಳಿಂದ ಕೂಡಿದ ಯಾವುದೋ ಒಂದು ಗೊಲ್ಲರಹಳ್ಳಿಯಲ್ಲಿ ಎಲ್ಲೋ ಬಿದ್ದಿದ್ದರೂ,

ಸಹಜವಾಗಿಯೇ ಹೆಚ್ಚು ಪರಿಶುದ್ಧವಾಗಿರುವ, ತ್ರಾಸವೆಂಬ ಮಣಿದೋಷವಿಲ್ಲದ,

(ನಾನು) ವಿಶ್ವಾಮಿತ್ರಋಷಿಯೊಡನೆ ಜನಕರಾಜನ ಪಟ್ಟಣಕ್ಕೆ ಪ್ರವೇಶಿಸಿದ ಸಂದರ್ಭದಲ್ಲಿ ಈರೀತಿ ಭಾಗ್ಯಶಾಲಿಯಾದ ನನ್ನಿಂದ ಧನುರಾರೋಪಣವೆಂಬ * ಪ್ರಬಲವಾದ ಪ್ರಯತ್ನದಿಂದ ಪ್ರಾಪ್ತ

ವಾದ ಸೂರ್ಯವಂಶಕ್ಕೆ ಕಾಂತಿಯನ್ನುಂಟುಮಾಡುವ ಸ್ವರ್ಗೀಯವಾದ ರತ್ನವನ್ನು ನೀನು ಶಿಂಶುಪಾವೃಕ್ಷದ ಕೆಳಗೆ ನೋಡುವೆ.

ಟಿಪ್ಪಣಿ:--* ಉತ್ತಮವಾದ ಯಶಸ್ಸನ್ನು ತರುವ. ಇಲ್ಲಿ ರಮಣೀಯವಾದ ಎರಡು ಅರ್ಥಗಳು ತೋರಿಬರುತ್ತವೆ. ಮೊದಲನೆಯದು ಸೀತಾದೇವಿಯ ಪರವಾದುದು. ಮತ್ತೊಂದು ರತ್ನಪರವಾದುದು.

### ಪದ್ಯ ೧೦.

ಸಾ ಮೇ ದೃಷ್ಟಿ (ದಿಷ್ಟಂ) ಶ್ಶಫರನಯನಾ ಸನ್ನತಭ್ರೂಸ್ಸುಕೇಶೀ
ತನ್ವೀ ತುಂಗಸ್ತನಭರನತಾ ತಪ್ತಜಾಂಬೂನದಾಭಾ ।
ಬಾಲಾ ಯುಷ್ಮತ್ಪ್ರತಿಮಗಮನಾ ವೇದಿಮಧ್ಯಾ ವರಾಂಗೀ
ಶೃಂಗಾರಾಖ್ಯಂ ನಿಧಿಮಧಿಗತಾ ಶ್ರೇಯಸೀ ದೇವತೇವ ॥

ಇಲ್ಲಿ ಸೀತೆಯ ಸೌಂದರ್ಯವು ಬಹಳ ಚೆನ್ನಾಗಿ ವರ್ಣಿತವಾಗಿದೆ:-

ಅವಳು * ಮೀನುಗಳಂತೆ ಕಣ್ಣುಳ್ಳವಳು. ಹುಬ್ಬುಗಳು ಧನುಸ್ಸಿನಂತೆ ಬಗ್ಗಿವೆ. ತಲೆಗೂದಲು ಹೆಚ್ಚಾಗಿದ್ದು ನೋಡುವುದಕ್ಕೆ ‡ ಬಹು ರಮಣೀಯವಾಗಿದೆ. † ಕೃಶಳಾಗಿದ್ದಾಳೆ. ಪೀವರವಾದ ಪಯೋಧರಗಳ ಭಾರದಿಂದಲೇ ಸ್ವಲ್ಪ ಬಗ್ಗಿರುವಳು. ಅವಳ ಮೈಯ ಕಾಂತಿಯು ಪುಟಕ್ಕೆಹಾಕಿದ ಅಪರಂಜೀ ಚಿನ್ನದ ಬಣ್ಣದಂತಿದೆ. ÷ ನಿಮ್ಮ ನಡಿಗೆಗೆ ಸಮನಾದ ನಡೆಯುಳ್ಳವಳು. ⁑ ವೇದಿಮಧ್ಯದಂತೆ ನಡುವುಳ್ಳವಳು. ಅವಯವಗಳು ಮನೋಹರವಾಗಿವೆ. ಈ ಕಾರಣಗಳಿಂದ ಶೃಂಗಾರಾಭಿಮಾನ ದೇವತೆಯಂತೆ ಇರುವಳು. ಇಂತಹ ಅನೇಕಗುಣಗಳಿಂದ ಕೂಡಿದ ಸೀತೆಯು ನನ್ನ ಕಣ್ಣೇ ಆಗಿದ್ದಾಳೆ. ಭಾಗ್ಯವೇ ಆಗಿದ್ದಾಳೆ.

ಟಿಪ್ಪಣಿ:--* ಹಾರುವ ಮೀನಿನಂತೆ ಅಕ್ಷಗಳನ್ನುಳ್ಳವಳು.
‡ ಕಪ್ಪಗೆ ಹೊಳೆಯುತ್ತಿದೆ.
† ತೆಳುವಾಗಿದ್ದಾಳೆ.

+ ರಾಜಹಂಸಗಳಂತೆ ಮೆಲ್ಲಗೆ ಮನೋಹರವಾಗಿ ನಡೆಯತಕ್ಕವಳು. ಹಂಸ ಯಾನೆ.
$ ತೆಳುವಾದ ನಡುವುಳ್ಳವಳು. ಸಿಂಹಮಧ್ಯೆ.

**ಪದ್ಯ ೧೧.**

ಸಾ ತೇ ಯಾವನ್ನಯನಸಲಿಲೈ ಯಾತಿ ಮೋಹಾಲಸಾ ವಾ
ಸಂದೇಶಂ ವಾ ಮಮ ಪಗತಯೋಃ ಶ್ರಾವಯಂತೀ ಶಕುಂತಾನ್ ।
ಅತ್ಯಾಸನ್ನಪ್ರಿಯವಚನತಾಂ ಸೂಚಯದ್ಭಿರ್ನಿಮಿತ್ತೈಃ
ಏತಾಮುತ್ಪ್ರಸ್ಥಗಿತನಯನಂ ವೀಕ್ಷಮಾಣಾ ದಿಶಂ ವಾ ॥

ಆ ಸೀತೆಯು, ಮನಸ್ಸು *ಚಂಚಲವಾಗಿ ಶ್ರಮವಿದ್ದರೂ, ಕೆಲಸಮಾಡತಕ್ಕವಳಾಗಿಯಾದರೂ, ನನಗೆ ತಲಪಿಸುವುದಕ್ಕೋಸ್ಕರ ‡ಪಕ್ಷಿಗಳನ್ನು ಕುರಿತು ತನ್ನ ಸಮಾಚಾರವನ್ನು ಹೇಳತಕ್ಕವಳಾಗಿ ಯಾದರೂ, ಮುಂದೆ ಒದಗುವ ಸಂತೋಷಕರವಾದ ಸಂದೇಶ †ಶ್ರವಣವನ್ನು ಸೂಚಿಸುತ್ತಿರುವ ಶುಭಶಕುನಗಳನ್ನು ನೋಡಿ ಆನಂದ ಬಾಷ್ಪಗಳಿಂದ ಆವೃತವಾದ ಕಣ್ಣುಗಳುಳ್ಳವಳಾಗಿಯಾದರೂ, ನಾನು ವಾಸಿಸುತ್ತಿರುವ ಉತ್ತರದಿಕ್ಕನ್ನು ನೋಡುತ್ತಿರುವವಳಾಗಿಯಾದರೂ ಇರಬಹುದು. ಇಂತಹ ಪ್ರೋಷಿತ ಭರ್ತೃಕೆಯನ್ನು ನೋಡುವೆ.

ಟಿಪ್ಪಣಿ:—* ವ್ಯತ್ಯಾಸಹೊಂದಿದ ಮನಸ್ಸಿನ ಸ್ಥಿತಿಯಿಂದ.
‡ ಪಕ್ಷಿಗಳಿಗೆ.
† ಕೇಳೋಣವನ್ನು. ಕೇಳಿಕೆಯನ್ನು.

ಒಳ್ಳೆಯದನ್ನು ಸೂಚಿಸುತ್ತಿರುವ ಈ ಶಕುನಗಳಿಂದ ಅಪ್ರಷ್ಟಹೀನಳಾದ ನನಗೆ ಪ್ರೀತಿಪಾತ್ರನ ಆ ವಿಧವಾದ ಸಂದೇಶವನ್ನು ಕೇಳುವ ಒಳ್ಳೆಯಭಾಗ್ಯವು ಒದಗುವುದೋ, ಎಂದು ದುಃಖಿಸಿಂದಲೂ, ಸಂತೋಷದಿಂದಲೂ ಆವೃತವಾದ ಮನಸ್ಸುಳ್ಳವಳಾಗಿ ಹೆಚ್ಚಾದ ಕಣ್ಣೀರಿಂದ ಕೂಡಿದವಳಾಗಿಯಾದರೂ ಇರಬಹುದು.

"ದೂರದೇಶಂ ಗತೇಕಾಂತೇಯಸ್ಯಾಪ್ರೋಷಿತಭರ್ತೃಕಾ।
ಅಸ್ಯಾಸ್ತುಜಾಗರಃ ಕಾರ್ಶ್ಯಂ ನಿಮಿತ್ತಾದಿವಿಲೋಕನಂ॥
ಮಾಲಿನ್ಯಮನಸಸ್ಥಾನಂ ಪ್ರಾಯಶ್ಯಯ್ಯಾನಿಷೇವಣಂ।
ಜಾಡ್ಯಚಿಂತಾಪ್ರಭೃತಯಃ ವಿಕ್ರಿಯಾಃ ಕಥಿತಾಬುಧೈಃ॥"

ಪತಿಯು ದೂರದೇಶಕ್ಕೆ ಹೊರಟುಹೋಗಿರಲಾಗಿ ದುಃಖಿಸುತ್ತಿರುವ ಸತಿಯು ಪ್ರೋಷಿತಭರ್ತೃಕೆಯು:-- ನಿದ್ರೆಮಾಡದಿರುವುದು ಕೃಶವಾಗಿರೋಣ ಶಕುನಗಳನ್ನು ನೋಡುತ್ತಿರುವುದು, ಮಲಿನವಸ್ತ್ರಧಾರಣೆ, ನಿಂತೆಡೆ ನಿಲ್ಲದಿರುವಿಕೆ, ಬಹುತರವಾಗಿ ಮಲಗಿರೋಣ, ಆಲಸತೆ, ಚಿಂತೆ ಮುಂತಾದುವು ಈ ಅವಸ್ಥೆಗೆ ಗುರ್ತು.

## ಪದ್ಯ ೧೨.

ಆಕಲ್ಪಾನ್ ವಾ ಸವಿಧನಿಹಿತಾನಾಲಪನ್ತೀ ವಿನೋದಾತ್
ಅಂಗಸ್ಪರ್ಶೋ ರಘುಕುಲಪತೇಃ ಸ್ಮರ್ಯತೇ ವಾ ನ ವೇತಿ ।
ಧ್ಯಾಯಂತೀ ವಾ ಚಿರವಿರಹಿತಾನೇಕಶಯ್ಯಾವಿಹಾರಾನ್
ತಸ್ಯಾ ನೂನಂ ನಿಯತಿಜನಿತಾ ತಾದೃಶೀ ಕಾಲಯಾತ್ರಾ ॥

ನನ್ನ ವಿರಹದಿಂದ ಶೂನ್ಯಹೃದಯಳಾಗಿ ಪಕ್ಕದಲ್ಲಿಟ್ಟುಕೊಂಡಿರುವ *ಮಾತನಾಡಲು ಅರ್ಹವಲ್ಲದ ಆಭರಣಗಳನ್ನು ಕುರಿತು, "ನೀವು ಶ್ರೀರಾಮನ ಆಲಿಂಗನ ಸುಖವನ್ನು ನೆನೆದುಕೊಳ್ಳುತ್ತೀರೋ ಇಲ್ಲವೋ" ಎಂದು ಹೋಗುತ್ತಾ ಬರುತ್ತಾ ಮಾತನಾಡಿಕೊಳ್ಳುತ್ತಿರಬಹುದು. ಅಥವಾ ಬಹುಕಾಲದಿಂದ ಬಿಟ್ಟಿರುವ ಏಕಶಯ್ಯಾ ವಿಹಾರಗಳನ್ನು ಧ್ಯಾನಿಸುತ್ತಿರುವವಳಾಗಿಯಾದರೂ ಇರಬಹುದು. ಇಂತಹ ಸೀತೆಯನ್ನು ನೀನು ನೋಡುವೆ. ದುಃಖವನ್ನು ಅನುಭವಿಸಲು ತಕ್ಕವಳಲ್ಲದ ಆಕೆಯು ಈರೀತಿ ಕಾಲಕಳೆಯುವುದು, ವಿಧಿಯಿಂದಲೇ ‡ ಉಂಟಾಯಿತೆಂಬುದು ನನ್ನ ನಿಶ್ಚಯವು.

ಟಿಪ್ಪಣಿ:--* ಅಚೇತನವಾದ. ಮಾತನಾಡಲು ಸಾಮರ್ಥ್ಯವಿಲ್ಲದ.
‡ ಉಂಟಾಯಿತೆಂಬುದನ್ನು ನಾನು ನಿಶ್ಚಯಿಸುತ್ತೇನೆ.

## ಪದ್ಯ ೧೩.

ಶುದ್ಧಾಮಿಂದೋಶ್ಶ್ವಪಚಭವನೇ ಕೌಮುದೀಂ ವಿಸ್ಫುರಂತೀಂ
ಆನೀತಾಂ ವಾ ವಿಷತರುವನೇ ಪಾರಿಜಾತಸ್ಯ ಶಾಖಾಂ ।
ಸೂಕ್ತಿಂ ರಮ್ಯಾಂ ಖಲಪರಿಸರೇ ಸತ್ಕವೇಃ ಕೀರ್ತ್ಯಮಾನಾಂ
ಮನ್ಯೇ ದೀನಾಂ ನಿಶಿಚರಗೃಹೇ ಮೈಥಿಲಸ್ಯಾತ್ಮಜಾತಾಂ ॥

ರಾವಣನ ಮನೆಯಲ್ಲಿ ಮನೋವ್ಯಥೆಯಿಂದ ಕುಗ್ಗಿ ಕೊರಗು ತ್ತಿರುವ ಜನಕರಾಜನ ಮಗಳಾದ ಸೀತೆಯನ್ನು, ಚಂಡಾಲನಮನೆ ಯಲ್ಲಿ ಹೊಳೆಯುತ್ತಿರುವ ದೋಷವಿಲ್ಲದಿರುವ ಬೆಳುದಿಂಗಳನ್ನಾಗಿ ಯೂ ಅಥವಾ ವಿಷವೃಕ್ಷಗಳ ಕಾಡಿನಲ್ಲಿ ತಂದು ನೆಟ್ಟಿರುವ ಕಲ್ಪ ವೃಕ್ಷದ ರೆಂಬೆಯನ್ನಾಗಿಯೂ ಮತ್ತು ಉತ್ತಮಕಾವ್ಯವನ್ನು ಕೇಳಿ ಹೊಟ್ಟೆಕಿಚ್ಚು ಪಡುವವನ ಸಮ್ಮುಖದಲ್ಲಿ *ಸ್ತುತವಾಗುವ ಉತ್ತಮ ಕವಿಯ ಕಾವ್ಯವೆಂಬ ಶುಭಕರವಾದ ಮಾತುಗಳನ್ನಾಗಿಯೂ ನಾನು ತಿಳಿಯುತ್ತೇನೆ.

ಟಿಪ್ಪಣಿ:—ಅದುದರಿಂದ ಕಲ್ಪವೃಕ್ಷದ ಕೊಂಬೆಯು ವಿಷವೃಕ್ಷಗಳ ಕಾಡಿನಲ್ಲಿರು ವುದರಿಂದಲೇ ಕೆಡದಿರುವಂತೆ ರಾಕ್ಷಸನ ಮನೆಯಲ್ಲಿ ವಾಸವಾಗಿದ್ದುದರಿಂದಲೇ ಸೀತೆಯ ಸಹಜವಾದ ಸೌಂದರ್ಯವು ಸ್ವಲ್ಪವೂ ಕಡಿಮೆಯಾಗುವುದಿಲ್ಲ. ಮತ್ತೇನೆಂದರೆ:—ವೈಸ್ಯ ಮಾತ್ರವೇ ಕಾಣುತ್ತದೆ.

ಇಲ್ಲಿ ರಾವಣನಿಗೆ ಚಂಡಾಲ ವಿಷವೃಕ್ಷಗಳೊಡನೆ ನಿದರ್ಶನವ ಹೇಳಿರುವುದರಿಂದ ಸದಾಚಾರಹೀನತೆ ಎಲ್ಲ ಪ್ರಾಣಿಗಳನ್ನೂ ಹಿಂಸಿಸುವ ಸ್ವಭಾವ ಕೆಟ್ಟದಾರಿಯಲ್ಲಿ ನಡೆ ಯೋಣ ಮೊದಲಾದುವು ಕಾಣಬರುತ್ತವೆ.

ಸೀತೆಗೆ, ಬೆಳುದಿಂಗಳು ಕಲ್ಪವೃಕ್ಷದ ಕೊಂಬೆ ಸತ್ಕವಿಸೂಕ್ತಿಗಳನ್ನು ನಿದರ್ಶನ ವಾಗಿ ಹೇಳಿರುವುದರಿಂದ, ಎಲ್ಲ ತಾಪಗಳನ್ನೂ ಪರಿಹರಿಸುವಿಕೆ, ಎಲ್ಲ ಇಷ್ಟಾರ್ಥಗಳನ್ನೂ ಕೊಡೋಣ, ಎಲ್ಲರಮನಸ್ಸನ್ನೂ ತನ್ನ ಕಡೆಗೆ ಎಳೆದುಕೊಳ್ಳುವಿಕೆ ಮುಂತಾದ ಸುಗುಣ ಗಳು ತೋರಿಬರುತ್ತವೆ.

* ಕೀರ್ತಿತವಾಗುವ. ಹೊಗಳಲ್ಪಡುವ.

‡ ಸದ್ಗುಣಗಳು.

## ಪದ್ಯ ೧೪.

ವರ್ಷಾಕೇಶಾಮಿವ ಕಮಲಿನೀಂ ವ್ಯಾಹತಾರ್ಥಾಮಿವೋಕ್ತಿಂ<br>
ಪಂಕಾಶ್ಲಿಷ್ಟಾಮಿವಬಿಸಲತಾಂ ಪತ್ಯಪೇತಾಮಿವೇಭೀಂ।<br>
ಮೇಘಚ್ಛನ್ನಾಮಿವಶಶಿಕಲಾಂ ವಿಘ್ನರುದ್ಧಾಮಿವಾಶಾಂ<br>
ವ್ಯಾಘ್ರತ್ರಸ್ತಾಮಿವ ಮೃಗವಧೂಂ ಭೂತಲೇಜ್ಯಾಮಿವಾಸ್ತ್ರಾಂ॥

ಮಳೆಯಿಂದ ಅಥವಾ ಮಂಜಿನಿಂದ * ಅಂದಗೆಟ್ಟಿರುವ ತಾವರೇ ಬಳ್ಳಿಯನ್ನಾಗಿಯೂ, ‡ ವಿಪರೀತಾರ್ಥಕೊಡುವ ವಾಕ್ಯ ವನ್ನಾಗಿಯೂ, ಎಲ್ಲಾಕಡೆಯೂ ಕೆಸರಿನಿಂದ ಬಳಿದಿರುವ ತಾವರೇ ಬಳ್ಳಿಯನ್ನಾಗಿಯೂ, ಸಲಗನಿಂದ ಅಗಲಿರುವ ಹೆಣ್ಣಾನೆಯನ್ನಾ ಗಿಯೂ, ಮೋಡಗಳಿಂದ ಆಚ್ಛಾದಿತವಾಗಿರುವ ಚಂದ್ರಕಲೆಯನ್ನಾ ಗಿಯೂ, ತೊಂದರೆಗಳಿಂದ ತಡೆಗೊಂಡ ದೀರ್ಘವಾದ ಅಭಿಲಾಷೆ ಯನ್ನಾಗಿಯೂ, ಹುಲಿಯಿಂದ ಹೆದರಿದ ಹೆಣ್ಣುಹುಲ್ಲೆಯನ್ನಾಗಿಯೂ, ಯುದ್ಧರಂಗದಲ್ಲಿ ಕತ್ತರಿಸಿ ಎಸೆದಿರುವ ಹೆದೆಯನ್ನಾಗಿಯೂ, ಸೀತೆ ಯನ್ನು ತಿಳಿಯುತ್ತೇನೆ.

ಇಲ್ಲಿ " ಕೆಸರಿನಿಂದ ಬಳಿದಿರುವ" ಎಂಬುದರಿಂದ ಸಹಜವಾ ಗಿರುವ ಅವಳ † ಕಾಂತಿಗೂ, ಸ್ನಾನಾನುಲೇಪನಗಳು ಇಲ್ಲದಿರುವುದ ರಿಂದ ಕೊಳೆಯಿಂದ ಶೋಭಾಹೀನವಾಗಿರುವಿಕೆಯು ಪ್ರಕಟಿತ ವಾಗುತ್ತದೆ.

ಟಿಪ್ಪಣಿ:—* ಶೋಭಾಶೈಥಿಲ್ಯವುಳ್ಳ.
‡ ತಪ್ಪು ಅರ್ಥ ಕೊಡುವ.
† ಲಾವಣ್ಯಕ್ಕೂ.

### ಪದ್ಯ ೧೫.

ಸ್ಮೃತ್ವಾಪೂರ್ವಂ ಸ್ಮರಶರಭಯೇಮತ್ಪರಿಷ್ವಂಗರಕ್ಷಾಂ
ಆಶ್ಲಿಷ್ಯನ್ತೀ ಮಲಸವಲಿತೈರಂಗಕೈರ್ಮಾತರಂ ಸ್ವಾಂ |
ಆಕಲ್ಪೇಽಪಿಶ್ರಮಮಧಿಗತೈರಂಗರಾಗೇಽಪಿ ಖಿನ್ನೈಃ
ಅಕ್ಷ್ಣಾಮ್ಯಧ್ಭಿಃಸ್ಮೃತಿಮಪಿ ಮುಹುಸ್ಸೌಕುಮಾರ್ಯಾತಿರೇಕಾತ್ ||

ಅವಳು ನನ್ನಿಂದ ಅಗಲುವುದಕ್ಕೆ ಮೊದಲು ಮೀನಕೇತನನ ಬಾಣಗಳಿಂದ ಭಯವುಂಟಾದಾಗ ನನ್ನ ಆಶ್ಲೇಷವನ್ನೇ ಪ್ರಾಣ ಧಾರಣೋಪಾಯವನ್ನಾಗಿ ನೆನೆದುಕೊಂಡಿದ್ದಳು.

ಈಗ ಸೌಕುಮಾರ್ಯ ಹೆಚ್ಚಿ ವಸ್ತ್ರಮಾಲ್ಯಾಭರಣಗಳಿಂದ ಅಲಂಕರಿಸಿಕೊಳ್ಳುವ ಸಂದರ್ಭದಲ್ಲೂ ಮನಸ್ಸಿನ ಖೇದವನ್ನು ಹೊಂದಿರುವವುಗಳಾದ, ಗಂಧವನ್ನು * ಹಚ್ಚಿಕೊಳ್ಳುವುದರಲ್ಲೂ ಆಯಾಸಗೊಂಡಿರುವ, ಪುನಃ ಪುನಃ ಆಭರಣಗಂಧಾದಿಗಳ ‡ ನೆನಪನ್ನು ಸಹಿಸಲಾರದವುಗಳಾದುದರಿಂದಲೇ ಮಂದವಾದ ಚಲನೆಗಳುಳ್ಳ ಅವಯವಗಳಿಂದ ತನ್ನ ತಾಯಿ ಭೂದೇವಿಯನ್ನು † ತಬ್ಬಿಕೊಳ್ಳುತ್ತಿರುವವಳನ್ನಾಗಿ ತಿಳಿಯುತ್ತೇನೆ.

ಹಿಂದೆ ದರ್ಪಕನು ತನ್ನಮೇಲೆ ಬಾಣಗಳನ್ನು ಪ್ರಯೋಗಿಸಿದಾಗ ನನ್ನ ಆಶ್ಲೇಷವೇ ರಕ್ಷಕವಾಗಿತ್ತೆಂದು ಸ್ಮರಿಸಿಕೊಂಡೋ ಎಂಬಂತೆ ಈಗಲೂ ಆರೀತಿ ಭಯವುಂಟಾಗಲು ಅವಳ ನನ್ನ ಸಮೀಪದಲ್ಲಿ ಇಲ್ಲದಿರುವುದರಿಂದ ತನ್ನ ತಾಯಿಯ ಆಶ್ಲೇಷವನ್ನೇ ರಕ್ಷಣೆಯನ್ನಾಗಿ ತಿಳಿದು ಹಾಗೆ ಆಚರಿಸುತ್ತಿರುವವಳನ್ನಾಗಿ ತಿಳಿಯುತ್ತೇನೆ.

ಟಿಪ್ಪಣಿ:—* ಹಚ್ಚಿಕೊಳ್ಳಬೇಕೆಂಬ ಪ್ರಸ್ತಾಪದಲ್ಲೂ.
‡ ಸ್ಮರಣೆ. ಸ್ಮೃತಿ.
† ಆಶ್ಲೇಷ=ಆಲಿಂಗನ.

**ಪದ್ಯ ೧೬.**

ಭೂಯೋಭೂಯಃ ಕರಸರಸಿಜೇನಾಸ್ಯ ರೋಮಾಂಚಿತಾಂಗಾಂ
ಮೌಳೌ ಚೂಡಾಮಣಿವಿರಹಿತೇ ನಿರ್ವಿಶಂತೀಂನಿಧಾಯ |
ಅಂತಸ್ತಾಪಾದಧಿಗತ ರುಜೋರಾದರಾದರ್ಪಯಂತೀಂ
ಪರ್ಯಾಯೇಣಸ್ತನ ಕಲಶಯೋರಂಗುಳೀಯಂ ಮದೀಯಂ ||

ನನ್ನ ಉಂಗುರವನ್ನು, ಆಗಾಗ ಕಮಲದಂತಿರುವ ಕೈಯಲ್ಲಿಟ್ಟುಕೊಳ್ಳುವಳು, ಆಗ ಅವಳಿಗೆ ಮೈಯಲ್ಲೆಲ್ಲಾ ರೋಮಾಂಚವೇಳುವುದು.

ಚೂಡಾಮಣಿಯಿಲ್ಲದಿರುವ ತಲೆಯ ಗಂಟಿನಲ್ಲಿ, ಅದನ್ನು ಇಟ್ಟುಕೊಂಡು ಆನಂದಿಸುವಳು. ಹೆಚ್ಚಾದ ವಿರಹತಾಪದಿಂದ ತಪ್ತವಾಗಿರುವ *ವಕ್ಷೋಜಗಳಲ್ಲಿ ಒಂದಾದ ಮೇಲೊಂದರಲ್ಲಿ ಅದನ್ನು ಪ್ರೀತಿಯಿಂದ ಇಟ್ಟುಕೊಳ್ಳುವಳೆಂದು ತಿಳಿಯುತ್ತೇನೆ.

ಟಿಪ್ಪಣಿ:—* ಉರೋಜಗಳಲ್ಲಿ.

**ಪದ್ಯ ೧೭.**

**ಅಂಬಾತುಲ್ಯಾಸುಚರಿತಫಲಂ ದಿವ್ಯಮಾಲೇಪನಂ ಪ್ರಾಕ್**
**ಅಂಗೇಷ್ವಸ್ಯಾಃ ಸ್ಥಿರಮನುಗುಣಂ ಯದ್ವಿತೇನೇಽನಸೂಯಾ |**
**ಧಾರಾಕಾರೈಃಸ್ತನ ಕಲಶಯೋರಾಪತದ್ಭಿಸ್ಸಮಂತಾತ್**
**ಸಂತಾಪೋಷ್ಣೈಸ್ತದಪಿಬಹುಳೈರಶ್ರುಭಿಃ ಕ್ಷಾಳಯಂತೀಂ ||**

ಮೊದಲು, *ತಾಯಿಗೆ ಸಮಳಾದ ಅತ್ರಿಋಷಿಯ ಪತ್ನಿ ಅನಸೂಯಾದೇವಿಯು, ಸೀತೆಯ ಎದೆ ಮೊದಲಾದ ಅವಯವಗಳಲ್ಲಿ, ‡ತನ್ನ ಎಲ್ಲಾ ಪುಣ್ಯಫಲಗಳಿಗೆ ಸಾಕ್ಷಭೂತವಾಗಿ †ಸ್ವರ್ಗದಲ್ಲಿ ಹುಟ್ಟಿದ ಬಹುಕಾಲ ಬಾಳಿಕೆಬರುವ, ಅವಳ ಸೌಕುಮಾರ್ಯ ಸೌಂದರ್ಯ ಗಳಿಗೆ ಹೊಂದಿಕೆಯಾದ ಸುಗಂಧದ್ರವ್ಯವನ್ನು ÷ಅರ್ಪಿಸಿದಳು. $ಎಡೆಬಿಡದೆ ಉರೋಜಗಳ ಎಲ್ಲಾ ಕಡೆಯಿಂದಲೂ, "ನಾನು ಮುಂದು ತಾನು ಮುಂದು" ಎಂದು ಬೀಳುತ್ತಿರುವ ವಿರಹ ದಿಂದುಂಟಾದ ಸಂತಾಪದಿಂದ ಬೆಚ್ಚಗಿರುವ ಹೆಚ್ಚಾದ ಕಣ್ಣೀರಿನಿಂದ ಆ ಪರಿಮಳ ದ್ರವ್ಯವನ್ನು ತೊಳೆದುಹಾಕುತ್ತಿರುವವಳನ್ನಾಗಿ ತಿಳಿ ಯುತ್ತೇನೆ.

ಟಿಪ್ಪಣಿ:—* ಕೌಸಲ್ಯಾ ಭೂದೇವಿಯರಿಗೆ.
‡ ಸೀತೆಯ.
† ಅದರಂತೆ ಆಶ್ಚರ್ಯಕರವಾದ.
÷ ಕೊಟ್ಟಳು.
$ ಧಾರೆಧಾರೆಯಾಗಿ.

## ಪದ್ಯ ೧೮.

ಅಗ್ರಾಹ್ಯತ್ವಾತ್ ವಿಷಮಯಮಿತಂ ಕೇಶಹಸ್ತಂ ಮಯಾಪ್ರಾಕ್
ಆಬಿಭ್ರಾಣಾಂ ತನುಪರಿಮಳಶ್ರದ್ಧಯೇವಾವ ಕೀರ್ಣಂ |
ಅರ್ಚಾಹೇತೋರ್ಭುವಿರತಿಪತೇ ರಪ್ಸರೋಭಿರ್ವಿಮುಕ್ತಾಂ
ಅನ್ವಗ್ರಾತಾಮಿವಸುರತರೋರ್ಮಂಜರೀಂಚಂಚರೀಕೈಃ ||

ನನ್ನಿಂದ ಅಗಲುವುದಕ್ಕೆ ಮೊದಲು, ಆಕೆಯ ತಲೆಯಲ್ಲಿ, ಕೈಗಳಿಂದ ಸೇರಿಸಿ ಹಿಡಿಯುವುದಕ್ಕೆ ಆಗದಷ್ಟು ಹೆಚ್ಚಾದ ಕೂದಲಿದ್ದಿತು.

ಈಗ, ಅದು ಬಿಚ್ಚಿ ಹೋಗುವಹಾಗೆ ಗಂಟುಹಾಕಿರುವುದರಿಂದ ಮೈಮೇಲೆಲ್ಲಾ ಚದರಿಹೋಗಿ, ಅವಳ ದೇಹದ ಉತ್ತಮವಾದ ಪರಿಮಳದಲ್ಲಿ ಆಶೆಯಿಂದಲೋಪಾದೆಯಲ್ಲಿ ಹರಡಿಕೊಂಡಿರುವಂತಿದೆ.

ಊರ್ವಶೀಮೊದಲಾದ ಸ್ವರ್ಗಲೋಕದ ಕಾಮಿನಿಯರು, ಭೂಲೋಕದಲ್ಲಿ, ರತಿಪತಿಯ ಪೂಜೆಗೋಸ್ಕರ ಅರ್ಪಿಸಿದ, ತುಂಬಿಗಳಿಂದ ಅನುಸರಿಸಿ ಕಲ್ಪವೃಕ್ಷದಿಂದ ಭೂಲೋಕಕ್ಕೆಬಂದ ಅದರ ಹೂಗೊಂಚಲಂತಿರುವವಳನ್ನಾಗಿ ತಿಳಿಯುತ್ತೇನೆ.

ಟಿಪ್ಪಣಿ:—ಈ ಪದ್ಯದಲ್ಲಿ ಸೀತೆಯು ಎರಡುರೀತಿಗಳಲ್ಲಿ ವರ್ಣಿತಳು:—

ಈಕೆಯು ಕುಳಿತುಕೊಂಡಿದ್ದಾಳೆ. ತಲೆಯಗಂಟು ಬಿಚ್ಚಿಹೋಗಿ ಮೈಮೇಲೆಲ್ಲಾ ವ್ಯಾಪಿಸಿರುವುದನ್ನು ನೋಡಿದರೆ, ಅವಳ ಕೇಶಪಾಶವು ದೇಹದ ಪರಿಮಳದಲ್ಲಿ ಆಶೆಯಿಂದ ಹರಡಿಕೊಂಡಿದೆಯೆಂಬಂತಿದೆ.

ಸ್ವರ್ಗಲೋಕದ ಊರ್ವಶೀಮೊದಲಾದ ಕಾಮಿನಿಯರು, ಭೂಲೋಕದಲ್ಲಿ ರತಿಪತಿಯ ಪೂಜೆಗೋಸ್ಕರ ಅರ್ಪಿಸಿದ ಕಲ್ಪವೃಕ್ಷದ ಹೂಗೊಂಚಲು, ತುಂಬಿಗಳಿಂದ ಅನುಸೃತವಾದಂತೆ ಸೀತೆಯಿದ್ದಾಳೆ. ಎಂದರೆ:—ಸೀತಾದೇವಿಯ ತಲೆಗೂದಲು ಕಪ್ಪಗೆ ಹೊಳೆಯುತ್ತಿರುವುದರಿಂದ ತುಂಬಿಗಳಂತಿದೆಯೆಂದೂ, ದೇಹವು ಮುತ್ತಿನಂತೆ ಹೊಳೆಯುತ್ತಿರುವುದರಿಂದ ಹೂಗೊಂಚಲೆಂದೂ ವರ್ಣಿತವಾಗಿದೆ. ಹೂಗೊಂಚಲೊಡನೆ ತುಂಬಿಗಳಿರುವುದು ಸಹಜ.

ಪದ್ಮಿನೀಜಾತಿ ಸ್ತ್ರೀಯಲಕ್ಷಣ:—

ಕಮಲಮುಕುಳಮೃದ್ವೀಫುಲ್ಲ ರಾಜೀವಗಂಧಿಃ......ಸೌರಭಂದಿವ್ಯಮಂಗೇ ।
ಚಕಿತಮೃಗದೃಗಾಭೇಪ್ರಾಂತರಕ್ತೇಚನೇತ್ರೇ......॥
ತಿಲಕುಸುಮಸಮಾನಾಂ ಬಿಭ್ರತೀನಾಸಿಕಾಂ ಯಾದ್ವಿಜಗುರುಸುರ
ಪೂಜಾಶ್ರದ್ಧಧಾನಾಸದೈವ ।
ಕುವಲಯದಳಕಾಂತಿಃ ಕಾಪಿಚಾಂಪೇಯಗೌರೀ......॥
ಪ್ರಜತಿಮೃದುಸಲೀಲಂ ರಾಜಹಂಸೀವ ತನ್ವೀತ್ರಿವಳಿಲಲಿತಮಧ್ಯಾ
ಹಂಸ ವಾಣೀಸುವೇಷಾ ।
ಮೃದುಶುಚಿಲಘುಭುಙ್ತೇಮಾನಿನೀ ಗಾಢಲಜ್ಜಾ ಧವಳಕುಸುಮವಾಸೋ।
ವಲ್ಲಭಾಪದ್ಮಿನೀಸ್ಯಾತ್ ॥

## ಪದ್ಯ ೧೯.

ಆನೀತಂ ಯತ್ತ್ವರಿತಮಚಲಾದುತ್ತರೀಯಂ ಪ್ಲವಂಗೈಃ
ಅಸ್ಯಾಕಾರೈಸ್ಸದೃಶಮಭಿತಸ್ತ್ವತ್ ಪ್ರಿಯಾರೂಪಚಿಹ್ನಂ ।
ಬಾಲಾದಿತ್ಯದ್ಯುತಿಸಹಚರಂ ಚಾರುವಾಸೋವಸಾನಾಂ
ಸಂಧ್ಯಾರಾಗವ್ಯತಿಕರವತೀಂ ಚಂದ್ರಲೇಖಾಮಿವಾನ್ಯಾಂ ॥

ಸುಗ್ರೀವನಪಕ್ಷದ ಕಪಿಗಳು, ನಾನು ಅಲ್ಲಿಗೆ ಬಂದಾಗ ಋಶ್ಯಮೂಕಪರ್ವತದ ಗುಹೆಗೆ ಹೋಗಿ, ಸೀತೆಯು * ಮೇಲೆ ಹೊದೆಯುತ್ತಿದ್ದ ವಸ್ತ್ರವನ್ನು ಬೇಗ ನನ್ನ ಬಳಿಯಲ್ಲಿ ತಂದಿಟ್ಟರು. ಈಗಲೂ, ಅವಳು ‡ ಮನೋಹರತೆಯಲ್ಲಿ ಈ ಯುತ್ತರೀಯಕ್ಕೆ ಸಮನಾಗಿಯೂ, ಅದರ ಎಲ್ಲ ಕಡೆಗಳಲ್ಲೂ ನಿನ್ನ ಪ್ರಿಯಳ ಆಕಾರಕ್ಕೆ ಸಮವಾದ ಚಿತ್ರವುಳ್ಳದ್ದಾಗಿಯೂ ಇರುವ, ಆಗತಾನೇ † ಹುಟ್ಟಿದ ಸೂರ್ಯನ ÷ ಕಾಂತಿಗೆ ಸಮನಾದ ಪೀತಾಂಬರವನ್ನು ಹೊದೆದಿರುವಳು. ಇದರಿಂದ ಸಂಧ್ಯಾರಾಗದಂತೆ ಬಣ್ಣವುಳ್ಳ ಸುಪ್ರಸಿದ್ಧ ಚಂದ್ರಲೇಖೆಗಿಂತಲೂ ಅಧಿಕಮನೋಜ್ಞವಾದ $ ಅಪೂರ್ವವಾದ ಚಂದ್ರಕಲೆಯಂತಿರುವ ಸೀತೆಯನ್ನು ನೋಡುವೆ.

ಈ ಪದ್ಯದಲ್ಲಿ ಸೀತೆಯು ಸುಪ್ರಸಿದ್ಧ ಚಂದ್ರಕಲೆಗಿಂತಲೂ ಹೆಚ್ಚು ಮನೋಹರಳೆಂದು ವರ್ಣಿತಳು.

ಟಿಪ್ಪಣಿ:—* ಮೇಲುದುವನ್ನು, ಉತ್ತರೀಯವನ್ನು.
‡ ಚಿತ್ತಾಕರ್ಷಕತ್ವ.
† ಹುಟ್ಟುತ್ತಿರುವ, ಉದಯಿಸುತ್ತಿರುವ.
÷ ಹೊಳೆಯುವ, ಕಣ್ಗೊಳಿಸುವ.
$ ಬೇರೆಯಾದ, ವಿಲಕ್ಷಣವಾದ.
ರೇಷ್ಮೆಯ ಉತ್ತರೀಯದಲ್ಲಿ ಚಿನ್ನದ ಸಲಿಗೆಗಳಿಂದ ರಾಜಹಂಸೆಯ ಚಿತ್ರಗಳು ನೆಯ್ದಿವೆ.

## ಪದ್ಯ ೨೦.

ವಕ್ತುಂಮಾರ್ಗಂಕಿಲವಸುಮತೀಂ ಜಗ್ಮುಷಸ್ತತ್ಪದಾಬ್ಜಾತ್
ಮಂಜೀರಸ್ಯ ತ್ವದುಪಮರುತೇರ್ದಕ್ಷಿಣಸ್ಯಾಸ್ಯತುಲ್ಯಂ |
ಅಂಕಾರೂಢೇ ಚರಣಕಮಲೇ ಮತ್ಕರೇಣೋಪಧೇಯಂ
ವಾಮಂಶಾಖಾಶಿಖರನಿಹಿತಂ ವೀಕ್ಷ್ಯಗಾಢಂ ವಿಷಣ್ಣಾಂ ||

ಸೀತೆಯು, ರಾವಣನಿಂದ ಅಪಹೃತಳಾದಾಗ ಅವಳು ಹೋದ ದಾರಿಯನ್ನು, ನನಗೆ ತಿಳಿಯಪಡಿಸುವುದಕ್ಕೋಸ್ಕರವೋ ಎಂಬಂತೆ ಅವಳ ಪದಕಮಲದಿಂದ ಭೂಮಿಯ ಕಡೆಗೆ * ಕಾಲುಂಗುರವು ‡ ಬಿದ್ದಿತು. ಅದರಿಂದಾಗುವ ಸದ್ದು, ನಿನ್ನ ಧ್ವನಿಗೆ ಸಮನಾದುದು. ಈಗ ನನ್ನಲ್ಲಿ ಬಲಗಾಲಿನ ನೂಪುರವಿದೆ.

ಆಕೆಯು ನನ್ನ ಇಷ್ಟಪ್ರಕಾರ ಪಾದಪದ್ಮವನ್ನು ನನ್ನ ತೊಡೆಯ ಮೇಲಿಟ್ಟಾಗ, ನನ್ನ ಕೈಯಿಂದಲೇ ಅದನ್ನು ತೊಡಿಸುತ್ತಿದ್ದೆನು. ಅವಳು ಅದನ್ನು ಈಗ ಕಾಲ್ಬೆರಳುಗಳಿಂದ ಕಳಚಿ ಶಿಂಶುಪಾವೃಕ್ಷದ ಕೊಂಬೆಯ ಮೇಲೆ ಇಟ್ಟಿದ್ದಾಳೆ. ಆ ಎಡಗಾಲ್ಬೆರಳಿಗೆ ಧರಿಸುವ ಅಂದುಗೆಯನ್ನು ಚೆನ್ನಾಗಿ ಪದೇ ಪದೇ ನೋಡಿ ದುಃಖಿಸುತ್ತಿರುವವಳನ್ನಾಗಿ ತಿಳಿಯುತ್ತೇನೆ.

ಟಿಪ್ಪಣಿ:—* ನೂಪುರ. ಕಾಲಂದುಗೆ=ಕಾಲುಂಗುರ.
‡ ಬಂದಿತು.

### ಪದ್ಯ ೨೧.

ಅಂಗೈರ್ವ್ಲಾಯತ್ಕಿಸಲಯಸವ್ಯೈರುಜ್ಝಿತಾಕಲ್ಪಪುಷ್ಪೈಃ
ಗಾಢಾಶ್ಲಿಷ್ಟಾಂವಪುಷಿವಿಮಲೇ ಬಿಂಬಿತಾಭಿರ್ಲತಾಭಿಃ ।
ಸಂತಾಪೋಷ್ಣಶ್ವಸನಪರುಷಚ್ಛಾಯಯಾಕಿಂಚದೂನಾಂ (ದೀನಾಂ)
ಬಂದೀಭೂತಾಂ ನಿಶಿಚರಗೃಹೇನಂದನಸ್ಯೇವಲಕ್ಷ್ಮೀಂ ॥

ಸೀತೆಯ ದೇಹವು, ಸ್ವಭಾವವಾಗಿಯೇ *ಲಾವಣ್ಯದಿಂದ ಮನೋಹರವಾಗಿದೆ. ಅವಯವಗಳು ಚಿಗುರುಗಳಂತೆ ‡ ಕೋಮಲವಾಗಿವೆ. ಚಿಗುರುಬಿಸಿಲಿನ † ಹೊಡೆತದಿಂದ ಬಾಡುವಂತೆ ಅವು ವಿರಹತಾಪದಿಂದ ಆಗಿವೆ.

ಲತೆಯು, ಬಿಸಿಲಿಂದ ಬಾಡುವಾಗ ಹೂಗಳು ಉದುರಿಹೋಗುವಂತೆ, ಸೀತೆಯು ಮೈಮೇಲಿದ್ದ ಒಡವೆಗಳನ್ನು ವಿರಹತಾಪದಿಂದ ತೆಗೆದುಬಿಟ್ಟಿದ್ದಾಳೆ.

ಅವಳು ಕುಳಿತ ಜಾಗದಲ್ಲಿರುವ ಬಳ್ಳಿಗಳು, ಆಕೆಯ ಉತ್ತಮವಾದ ಲಾವಣ್ಯವುಳ್ಳ ದೇಹದಲ್ಲಿ ಪ್ರತಿಬಿಂಬಿತವಾಗಿರುವುದನ್ನು ನೋಡಿದರೆ, ಸೀತೆಯು ಗೆಳೆತಿಯರಿಂದ ಆಲಿಂಗಿತಳಾದಂತೆ ಕಾಣುತ್ತಾಳೆ. ಅವಳಿಗೆ ವಿರಹತಾಪಹೆಚ್ಚಿ ಉಸಿರು ಬಹಳ ಬೆಚ್ಚಗೆಯಿರುವುದರಿಂದ ಆಕೆಯ ಅವಯವಗಳ ಕಾಂತಿಯು ಕಡಿಮೆಯಾಗಿ ದೇಹವು ಕೃಶವಾಗುತ್ತಲಿದೆ. ಇಂತಹ ಸೀತೆಯನ್ನು ರಾವಣನ ಮನೆಯಲ್ಲಿ ಸೆರೆಯಾಗಿರುವ ÷ ಇಂದ್ರೋದ್ಯಾನದ ಲಕ್ಷ್ಮಿಯನ್ನಾಗಿ ತಿಳಿಯುತ್ತೇನೆ.

ಟಿಪ್ಪಣಿ:—* ಮುತ್ತಿನಲ್ಲಿರುವ ನೀರೋಟವು ಲಾವಣ್ಯವೆನಿಸುವುದು.
‡ ಸುಕುಮಾರವಾಗಿವೆ. ಬಹುಬೇಗ ಬಾಡುವ ಸ್ವಭಾವವುಳ್ಳದ್ದು.
† ವೇಗದಿಂದ.
+ ಅಭಿಮಾನದೇವತೆಯನ್ನಾಗಿ.

**ಪದ್ಯ ೨೨.**

ಚೇತೋವೃತ್ತಿಂ ಶಮಯತಿಬಹಿಸ್ಸಾರ್ವಭೌಮೋನಿರೋಧೇ
ಮಯ್ಯೇಕಸ್ಮಿನ್ ಪ್ರಣಿಹಿತಧಿಯಂ ಮಾನ್ಮಥೇನಾಗಮೇನ |
ಅಭ್ಯಸ್ಯಂತೀ ಮನಿತರಜುಷೋಭಾವನಾಯಾಃ ಪ್ರಕರ್ಷಾತ್
ಸ್ವಾಂತೇನಾಂತರ್ವಿಲಯಮೃದುನಾನಿರ್ವಿಕಲ್ಪಂ ಸಮಾಧಿಂ ||

ಚಿತ್ತದ ರಜಸ್ತಮೋವೃತ್ತಿಗಳ ನಿರೋಧವೇ ಯೋಗವೆನಿಸುವುದು.

ಈ ಲಕ್ಷಣದಿಂದ ಸಂಪ್ರಜ್ಞಾತವೆಂಬ ಸಾತ್ವಿಕವೃತ್ತಿಯಿದ್ದರೂ, ಯೋಗಲಕ್ಷಣಕ್ಕೆ ಅವ್ಯಾಪ್ತಿಯಿಲ್ಲ.

ಯಮ, ನಿಯಮ, ಆಸನ, ಪ್ರಾಣಾಯಾಮ, ಪ್ರತ್ಯಾಹಾರ, ಧಾರಣ, ಧ್ಯಾನ, ಸಮಾಧಿಯೆಂಬಿವು ಯೋಗದ ಅಷ್ಟಾಂಗಗಳು.

ಈ ಅಂಗಗಳಲ್ಲಿ ಧಾರಣ, ಧ್ಯಾನ, ಆದಿಯಾದ ಕೆಲವು ಅಂಗಗಳು ಸಮಾಧಿಗೆ ಸಾಕ್ಷಾತ್ ಉಪಕಾರಕಗಳಾಗಿವೆ.

ಯಮನಿಯಮಾದಿ ಪ್ರತ್ಯಾಹಾರಾಂತವಾದ ಕೆಲವು ಅಂಗಗಳು ಪ್ರತಿಪಕ್ಷಭೂತಗಳಾದ ಹಿಂಸಾದಿ ವಿತರ್ಕಗಳನ್ನು ನಾಶಗೊಳಿಸುವುದರ ಮೂಲಕ ಸಮಾಧಿಗೆ ಉಪಕಾರಕಾಂಗಗಳಾಗಿವೆ.

ಸಂಪ್ರಜ್ಞಾತವೆಂಬ ಸಮಾಧಿಗೆ (ಧಾರಣ, ಧ್ಯಾನ, ಸಮಾಧಿ) ಈ ಮೂರೂ ಅಂತರಂಗಗಳು.

ಏಕವಿಷಯಕವಾದ ಮೂರು ಸಾಧನಗಳು ಸಂಯಮವೆನಿಸುವುದು. ನಾಭಿಚಕ್ರ, ಹೃದಯಪುಂಡರೀಕ, ತಲೆ, ಜ್ಯೋತಿಸ್ಸು, ನಾಸಿಕಾಗ್ರ, ಜಿಹ್ವಾಗ್ರ, ಇತ್ಯಾದಿ ದೇಶಗಳಲ್ಲಿ (ಸ್ಥಳ) ಯಾಗಲೀ, ಬಾಹ್ಯವಿಷಯಗಳಲ್ಲಿಯಾಗಲಿ, ವೃತ್ತಿಮಾತ್ರದಿಂದ ಚಿತ್ತದಬಂಧವು, ಬಂಧವೆಂಬ ಧಾರಣೆಯೆನಿಸುವುದು.

(ಚಿತ್ತದ ಬಂಧವೆಂದರೆ ವಿಷಯಾಂತರದ ಪರಿಹಾರ ಪೂರ್ವಕ ವಾಗಿ ಚಿತ್ತದ ಸ್ಥಿರೀಕರಣವು.)

ಸಮಾಧಿಃ :—ಸರ್ವಪ್ರಕಾರದಿಂದಲೂ ವಿಜಾತೀಯ ಪ್ರತ್ಯ ಯಗಳಿಂದ, ಅಸಂವಲಿತವಾದ (ಸೇರದಿರುವ) ಸಜಾತೀಯ ಪ್ರತ್ಯಯ ಪ್ರವಾಹಗಳು ಸಮಾಧಿಯೆನಿಸುವುದು.

ಒಟ್ಟಿನಲ್ಲಿ ಹೇಳುವುದಾದರೆ ಅತಿಸ್ವಚ್ಛ ಚಿತ್ತವೃತ್ತಿ ಪ್ರವಾಹ ರೂಪವಾದ ಧ್ಯಾನವೇ ಅರ್ಥಸ್ವರೂಪದಿಂದ ಭಾಸಮಾನವಾಗಿ ಸಮಾಧಿಯೆನಿಸುವುದು.

ಸಮಾಧಿಲಕ್ಷಣದಲ್ಲಿ ಸ್ವರೂಪಶೂನ್ಯಮಿವೇತಿ, ಅರ್ಥಮಾ ತ್ರೇತಿ ಮಾತ್ರೇಣ. ಧ್ಯಾನಸ್ವರೂಪ ಜ್ಞಾನಶೂನ್ಯಂ, ಇವಶಬ್ದದಿಂದ ಧ್ಯಾನಸ್ಯಸತ್ತಾದ್ಯೋತ್ಯತೆ-ಸಮಾಧಿಯಲ್ಲಿ ಧ್ಯಾನಸ್ವರೂಪ, ಜ್ಞಾನ ಶೂನ್ಯವಾಗಿ ಧ್ಯಾನದ (ಸತ್ತೆ) ಸದ್ಭಾವವು ತೋರುತ್ತದೆ. ಹೇಗೆಂದರೆ:—ಸ್ವಚ್ಛವಾದ ಸ್ಫಟಿಕಮಣಿಯು ಜಪಾಕುಸುಮರೂಪ ದಿಂದಲೇ ತೋರುತ್ತದೆಯಲ್ಲದೆ ಸ್ವಚ್ಛವಾದ ತನ್ನ ಮಣಿಯರೂಪ ದಿಂದ ತೋರದಿರುವಹಾಗೆ.

ಧಾರಣಾವಿಜಾತೀಯವೃತ್ತಿಯಿಂದ ವಿಚ್ಛಿನ್ನವಾದುದು ಧಾರಣೆಯೆನಿಸುವುದು.

ಧ್ಯಾನ:—ಸಜಾತೀಯ ವೃತ್ತಿಗಳಿಂದ ಕೂಡಿರುವುದು (ಅವಿ ಚ್ಛಿನ್ನ) ಧ್ಯಾನವೆನಿಸುವುದು.

ಸಮಾಧಿ:—ಧ್ಯೇಯ, ಧ್ಯಾನ, ಧ್ಯಾತೃ, ಇವುಗಳ ನಡುವೆ "ಧ್ಯೇಯಮಾತ್ರ ಸ್ಫೂರ್ತಿಮಾನ್" ಧ್ಯೇಯಮಾತ್ರದ ಸ್ಫೂರ್ತಿ ಯುಳ್ಳದ್ದು ಸಮಾಧಿಯೆನಿಸುವುದು. ಹೀಗೆ ಇವುಗಳಿಗೆ ವೈಲಕ್ಷಣ್ಯ.

ಧ್ಯೇಯಾತ್ ಧ್ಯಾನಸ್ಯಭೇದಃ ಕಲ್ಪನಾ ತದ್ವಿಹೀನಮಿತ್ಯರ್ಥಃ।

ಈ ಸಮಾಧಿಯು ಚಿತ್ತಭೂಮಿಭೇದದಿಂದ ಎರಡು ವಿಧವು.

## ೧ ಸಂಪ್ರಜ್ಞಾತ ೨ ಅಸಂಪ್ರಜ್ಞಾತ.

ಚಿತ್ತಕ್ಕೆ ಪಂಚಭೂಮಿಯುಗಳು ಆಗುತ್ತವೆ. (ಇವೆ.)

೧. ಕ್ಷಿಪ್ತ, ೨. ಮೂಢ, ೩. ವಿಕ್ಷಿಪ್ತ, ೪. ಏಕಾಗ್ರ, ೫. ನಿರುದ್ಧ.

ಸಂಪ್ರಜ್ಞಾತ, ಆತ್ಮಾಕಾರವಾದ ವೃತ್ತಿಯು, ರಜೋಗುಣದಿಂದುಂಟಾದ, ಚಾಂಚಲ್ಯರೂಪವಾದ, ವಿಕ್ಷೇಪಾಭಾವದಿಂದ ಒಂದೇ ವಿಷಯವುಳ್ಳದ್ದಾಗುತ್ತದೆ. ಅತಿ ಶುದ್ಧವಾದ ಸತ್ವಗುಣದಲ್ಲಿ ಚಿತ್ತವು ಏಕಾಗ್ರವುಳ್ಳದ್ದಾಗುತ್ತದೆ. ಈ ಭೂಮಿಯಲ್ಲಿ ಸಂಪ್ರಜ್ಞಾತವೆಂಬ ಸಮಾಧಿಯು. ಇದರಲ್ಲಿ ಧ್ಯೇಯಾಕಾರವಾದ ವೃತ್ತಿಯೂ ಭಾಸಿಸುತ್ತದೆ.

ಅಸಂಪ್ರಜ್ಞಾತ, ಆ ಧ್ಯೇಯಾಕಾರವಾದ ವೃತ್ತಿಯ ನಿರೋಧವಾಗಲಾಗಿ, ನಿರುದ್ಧವಾದಚಿತ್ತವು ಅಸಂಪ್ರಜ್ಞಾತ ಸಮಾಧಿಭೂಮಿಯೆನಿಸುವುದು.

ಶ್ರವಣಮನನದಿಂದ ಪುರುಷಮಾತ್ರ ಧ್ಯಾನಾಭ್ಯಾಸವು ಧರ್ಮಮೇಘವೆಂಬ ಹೆಸರುಳ್ಳದ್ದು.

ಶ್ರೇಷ್ಠವಾದ ವೈರಾಗ್ಯಪ್ರಸಾದರೂಪವಾದ, ಆ ರಸದಿಂದ (ಧ್ಯಾನಾಭ್ಯಾಸ) ಪುರುಷನನ್ನು ಸಾಕ್ಷಾತ್ ಕರಿಸುವವನಾಗಿ ನಿರ್ಬೀಜವೆಂಬ ಯೋಗವನ್ನು ಹೊಂದುತ್ತಾನೆ. (ಅರ್ಥ.)

ಕಾಲಕ್ರಮದಿಂದ ನಿರ್ಬೀಜನಿರೋಧ ಸಂಸ್ಕಾರವು ವೃದ್ಧಿಹೊಂದಲಾಗಿ ಸ್ವಪ್ರಕೃತಿಯಲ್ಲಿ ಚಿತ್ತವು ಲೀನವಾಗುವುದು. (ಲಯ)

ಹೀಗೆ ಚಿತ್ತಪ್ರಳಯವಾಗಲು ಪುರುಷನು ಸ್ವರೂಪಮಾತ್ರದಿಂದ ಪ್ರತಿಷ್ಠಿತನಾಗಿ (ಪ್ರತಿಷ್ಠಃ=ಕೇವಲನಾಗಿ ಮುಕ್ತನು ಎಂದೂ ಸಿದ್ಧವಾಗುವುದು.)

ಇದೇ ಎಲ್ಲ ಕಡೆಯಲ್ಲೂ ವಿರಕ್ತನಿಗೆ ಸಮಾಧಿಫಲವಾಗಿರುವುದು-ಸುಖವನ್ನು ಬಯಸದ ಯೋಗಿಗೆ ದೃಢಭೂಮಿಯಾಗುವುದು.

ಪ್ರಸಂಖ್ಯಾನದಲ್ಲಿ ವೈರಾಗ್ಯದಿಂದ ಧರ್ಮಮೇಘವು ಉಂಟಾಗಲಾಗಿ, ಪರವೈರಾಗ್ಯವು ಉದಯಿಸುವುದರಿಂದ—ಪ್ರಸಂಖ್ಯಾನದ ನಿರೋಧವೂ ಆಗುವುದು. ಇದರ ಲಾಭದಿಂದ ಅವಿದ್ಯಾದಿ ಕ್ಲೇಶಗಳು ಸಮೂಲವಾಗಿ ನಾಶವಾಗುವುವು. ಕುಶಲಾಕುಶಲಗಳಾದ, ಕರ್ಮಾಶಯಗಳೂ ಸಮೂಲವಾಗಿ ನಾಶಗೊಳ್ಳುವುವು. ಕ್ಲೇಶಕರ್ಮವು ನಿವೃತ್ತವಾಗಲು ಜೀವಸುಪ್ತದಶೆಯಲ್ಲೇ (ವಿದ್ವಾನ್) ಮುಕ್ತನಾಗುವನು.

ಮೇಲೆಹೇಳಿದ ಈ ಪ್ರಕ್ರಿಯೆಯನ್ನು ಅನುಸರಿಸಿ,

ಈ ಯೋಗದಲ್ಲಿ ಸಂಯಮರೂಪವಾದ ಅಂತರಂಗಸಾಧನವನ್ನು ಮುಂದೆ ಮಾಡಿ (ಪುರಸ್ಕರಿಸಿ) (ನೈಷಾಪಶ್ಯತಿರಾಕ್ಷಸ್ಯೋ, ಏಕಸ್ಥ ಹೃದಯಾಸೂನಂ ರಾಮಮೇವಾನುಪಶ್ಯತಿ) ಇವೇ ಮೊದಲಾದ ರೀತಿಯಿಂದ ಕೂಡಿದ, ತನ್ನ ವಿಷಯಕವಾದ, ಸೀತಾದೇವಿಯ ಭಾವನೆಯನ್ನು ಸಮಾಧಿಸ್ಥಿತಿಯಲ್ಲಿರುವುದನ್ನಾಗಿ ಭಾವಿಸಿ ರಾಮನು ಅದನ್ನು ಹೀಗೆ ಹೇಳುತ್ತಾನೆ.

ಸರ್ವಭೂಮಿಗಳಲ್ಲಿಯೂ ಪ್ರಸಿದ್ಧವಾದ,

(ಕ್ಷಿಪ್ತಮೂಢಾದಿ ಸರ್ವಾವಸ್ಥೆಗಳಲ್ಲಿಯೂ ಪ್ರಸಿದ್ಧವಾದ.)

ಸಾರ್ವಭೌಮದಲ್ಲಿ (ಯೋಗಃ ಸಮಾಧಿಃ ಸಚಸಾರ್ವಭೌಮಃ, ಇದು ಸೂಚಿತವು.)

ಅಭ್ಯಾಸವೈರಾಗ್ಯಗಳಿಂದ ಉಂಟಾದ ನಿರೋಧವು (ಚಿತ್ತವೃತ್ತಿ ನಿರೋಧವು) ಬಾಹ್ಯಪ್ರದೇಶವಲ್ಲಿ (ಹೊರಗಡೆ) ಚಿತ್ತದ ವೃತ್ತಿಗಳನ್ನು (ಕ್ಲಿಷ್ಟಾ ಕ್ಲಿಷ್ಟಾದಿಪಂಚ) ಶಾಂತಿಹೊಂದಿಸಲಾಗಿ,

(ಕ್ಷಿಪ್ತಮೂಢವಿಕ್ಷಿಪ್ತ ಭೂಮಿನಿರೋಧವು ಸೂಚಿತವು.)

ಮುಸ್ಮೃಥಸ ಸಂಬಂಧಿಯಾದ ಆಗಮದಿಂದ (ಶಾಸ್ತ್ರದಿಂದ) ರಾಮಚಂದ್ರನಾದ ಸನ್ಮೂರ್ತಿನಲ್ಲೀ (ಸರ್ವಕಾರಣಭೂತ, ಸರ್ವೇಶ್ವರ, ಪರಬ್ರಹ್ಮನಾದ) ಪ್ರಣಿಧಾನವೆಂಬ ಹೆಸರುಳ್ಳ ಭಕ್ತಿ ವಿಶೇಷದಿಂದ ಇಟ್ಟ ಬುದ್ಧಿಯುಳ್ಳವನಾದ ಇವರಿಂದ ಸೀತೆಗೆ ಅಂಗಾಂತರಂಗಗಳನ್ನು ಅಪೇಕ್ಷಿಸದೆಯೇ ಸಮಾಧಿ ಸಿದ್ಧಿಯಾಗಿರುವುದೆಂದು ಸೂಚಿತವು.)

(ಇದರಿಂದ ಧಾರಣ, ಧ್ಯಾನ, ಸಂಪ್ರಜ್ಞಾತರೂಪ, ಸಮಾಧಿರೂಪ ಸಂಯಮವು ಪ್ರಕಟಿತವು.)

> ಯೋಗಃ ಸಮಾಧಿಃ ಸಚ ಸಾರ್ವಭೌಮಃ ಚಿತ್ತಸ್ಯಧರ್ಮಃ
> ಕ್ಷಿಪ್ತಮೂಢವಿಕ್ಷಿಪ್ತಮೇಕಾಗ್ರಮಿತಿ ಚಿತ್ತಭೂಮಯಃ ।

ಸಂಪ್ರಜ್ಞಾತಯೋಗವೆಂಬುದು ಹೇಳಲ್ಪಡುತ್ತದೆ:—

ಯಾವುದು ಏಕಾಗ್ರವಾದ ಚಿತ್ತದಲ್ಲಿ ಉಂಟಾದ ಅರ್ಥವನ್ನು ಪ್ರಕಾಶಗೊಳಿಸುತ್ತದೆಯೋ, ಕ್ಲೇಶಗಳನ್ನು ಪರಿಹಾರಮಾಡಿ ಕರ್ಮಬಂಧಗಳನ್ನು ಬಿಡಿಸುತ್ತದೆಯೋ ಮತ್ತು ನಿರೋಧವನ್ನು ಅಭಿಮುಖವನ್ನಾಗಿ ಮಾಡುತ್ತದೋ ಅದು ಸಂಪ್ರಜ್ಞಾತಯೋಗವೆನಿಸುವುದು, ಇದು ವಿತರ್ಕವಿಚಾರಾದಿಗಳಿಂದ ಕೂಡಿದರೂ ಇವೆಲ್ಲವೂ **ಸಾಲಂಬನ ಸಮಾಧಿಗಳು.** (ಇದರಿಂದ ಚಿತ್ತಕ್ಕೆ ಏಕಾಗ್ರಭೂಮಿಸ್ಥಿತಿಯು ಉಕ್ತವಾಯಿತು.)

ಈ ಭೂಮಿಯಲ್ಲಿ ಧ್ಯೇಯಾಕಾರವಾದ ವೃತ್ತಿಯೂ ಭಾಸಿಸುತ್ತದೆಯೆಂದು ಹಿಂದೆ ಹೇಳಿದೆ.

ಈಗ ಅಸಂಪ್ರಜ್ಞಾತಸ್ಥಿತಿಯು ಹೇಳಲ್ಪಡುತ್ತದೆ.

ಇತರ ವಿಷಯವನ್ನು ಹೊಂದದಿರುವ (ಅನನ್ಯವೃತ್ತಿಯುಳ್ಳ.)

(ವ್ಯುತ್ಥಾನಸಂಸ್ಕಾರ ಮುಲವಿಲ್ಲದಿರುವುದರಿಂದ ನಿರೋಧ ಮಾತ್ರ ವಿಷಯಳಾಗಿರುವಳು.) ವಾಸನೆಯು (ಸಂಸ್ಕಾರದ ಅಭಿವೃದ್ಧಿಯ ದೆಸೆಯಿಂದ, ಇದರಿಂದ ಚಿತ್ತಕ್ಕೆ ಪ್ರಶಾಂತವಾಹಿತೆಯು ಸೂಚಿತವು.)

ಸ್ವಪ್ರಕೃತಿಯಲ್ಲಿಯೇ ಪ್ರಳಯವೂ (ತನ್ನ ಪ್ರಕೃತಿಯಲ್ಲೇ ವಿಲಯವಾಗುವುದರಿಂದ) ವೃತ್ತಿರೂಪಕಾರ್ಯವನ್ನು ಮಾಡದಿರುವುದರಿಂದ, ಅಭಾವವನ್ನು (ಶೂನ್ಯತೆ) ಹೊಂದಿದೆಯೋ ಎಂಬಂತಿರುವ ಚಿತ್ತದಿಂದ (ಕಾಲಕ್ರಮದಿಂದ ನಿರ್ಬೀಜ ನಿರೋಧಸಂಸ್ಕಾರವು ಹೆಚ್ಚಿದರೆ ತನ್ನ ಪ್ರಕೃತಿಯಲ್ಲಿ ಚಿತ್ತವು ಲಯವಾಗುವುದೆಂದು ಹಿಂದೆ ಹೇಳಿದೆ.)

ವಿವಿಧವಿಕಲ್ಪಶೂನ್ಯವಾದ ನಿರ್ವಿಕಲ್ಪವೆಂಬ ಸಮಾಧಿಯನ್ನು ಸರ್ವವೃತ್ತಿಗಳ ಕೊನೆಯಲ್ಲಿ (ಪ್ರತ್ಯಂತ) ಸಂಸ್ಕಾರಮಾತ್ರ ಶೇಷವಾದ (ಉಳಿದಿರುವ) ಚಿತ್ತನಿರೋಧರೂಪವಾದ ಅಸಂಪ್ರಜ್ಞಾತ ಸಮಾಧಿಯನ್ನು (ಧ್ಯೇಯಮಾತ್ರ ಭಾಸಿಸುತ್ತಿರುವ ಧ್ಯಾನವೆಂದು ಅರ್ಥ.) ಪರಿಚಯಮಾಡುತ್ತಾಳೋ ಎಂಬಂತೆ ಇರುವವಳನ್ನಾಗಿ ತಿಳಿಯುತ್ತೇನೆ. (ಇದರಿಂದ ನಿರುದ್ಧಾಭೂಮಿಸ್ಥಿತಿಯು ಹೇಳಿದಂತಾಯಿತು.)

"ಅಭ್ಯಸ್ಯಂತೀಂ" ಮೊದಲುಮಾಡಿ ಇದುವರೆಗೆ ಗ್ರಂಥದಿಂದ ಸಂಪ್ರಜ್ಞಾತ ಸಮಾಧಿಯ ಅನಂತರದಲ್ಲಿ ಉಂಟಾಗುವ ಅಸಂಪ್ರಜ್ಞಾತ ಸಮಾಧಿಯು ಹೇಳಿದ್ದಾಯಿತು.

ಟಿಪ್ಪಣಿ:—ಇಲ್ಲಿ ಮನೋಹರವಾದ ಎರಡು ಅರ್ಥಗಳು ಕಾಣಬರುತ್ತವೆ.

* ಯೋಗಾಭ್ಯಾಸದಿಂದ ಭಗವಂತನನ್ನು ಪ್ರತ್ಯಕ್ಷಮಾಡಿಕೊಳ್ಳುವ ಯೋಗಿಯ ವಿಷಯ.

‡ ಪತಿಯನ್ನೇ ದೈವವೆಂದು ತಿಳಿದು ಅವನ ಸಾಕ್ಷಾತ್ಕಾರಕ್ಕೆ ಧ್ಯಾನಮಾಡುವ ಸೀತೆಯ ವಿಷಯ.

**ಪದ್ಯ ೨೩.**

ಶೂನ್ಯಾದೃಷ್ಟಿಃ ಶ್ವಸಿತಮಧಿಕಂ ಮೀಲಿತಂ ವಕ್ತ್ರಪದ್ಮಂ
ಧಾರಾಕಾರಂ ನಯನಸಲಿಲಂ ಸಾನುಬಂಧೋ ವಿಲಾಪಃ |
ಇತ್ಥಂ ದೈನ್ಯಂ ಕಿಮಪಿ ವಿಧಿನಾ ದುರ್ನಿವಾರೇಣ ನೀತಾ
ಸಾ ಮೇ ಸಕ್ತಾ ತನುತರತನುಸ್ತಪ್ಯತೇ ನೂನಮಂತಃ ||

ಕಣ್ಣು, ನೋಡುವುದಕ್ಕೆ ಪದಾರ್ಥಗಳಿದ್ದರೂ ಅವುಗಳನ್ನು ನೋಡಲು * ದುರ್ಬಲವಾಗಿದೆ. ನಿಟ್ಟುಸಿರು ಹೆಚ್ಚಿದೆ. ರಾತ್ರಿಯ ತಾವರೆಯಂತೆ, ಮುಖಕಮಲವು ಸಂಕುಚಿತವಾಗಿದೆ. ಕಣ್ಣೀರು ಎಡೆ ಬಿಡದೆ ಹರಿಯುತ್ತಿದೆ.

† ಅಳುವೆಯು, ಆಕಾಲಕ್ಕೆ ಉಚಿತವಾದ ಪ್ರಿಯನ ಅಗಲಿಕೆ ಯಿಂದ ತನಗುಂಟಾದ ಅಸಹಾಯತೆಯನ್ನು ಪ್ರಕಾಶಪಡಿಸುವಿಕೆ ಮತ್ತು ಆತನ ಗುಣವರ್ಣನೆಗಳಿಂದ ಕೂಡಿದೆ.

ಬಲವತ್ತರವಾದ ದೈವದಿಂದ, ಮೇಲೆಹೇಳಿದಂತೆ ವಿವರಿಸುವು ದಕ್ಕಾಗದ ದೀನತೆಗೆ, ಸಿಕ್ಕಿಕೊಂಡಿದ್ದಾಳೆ.

ಆದುದರಿಂದಲೇ ಬಹಳ ಕೃಶವಾದ ದೇಹವುಳ್ಳ, ನನ್ನಲ್ಲೇ ನೆಟ್ಟಮನಸ್ಸಿನ ಆ ನನ್ನಪ್ರಿಯೆಯು, ಮನದಲ್ಲಿ ಬಹಳವಾಗಿ † ಬೇಗುದಿ ಗೊಳ್ಳುತ್ತಾಳೆಂದು ನಿಶ್ಚಯಿಸುತ್ತೇನೆ.

ನನ್ನ ಪ್ರೀತಿಪಾತ್ರಳನ್ನು ಸಂತಾಪಗೊಳಿಸುವ ಶಕ್ತಿಯು ÷ ವಿಧಿಗೆಹೊರ್ತು ಮತ್ತಾರಿಗುಂಟು?

ಸೀತೆಯ ದೀನಸ್ಥಿತಿಯನ್ನು ನೋಡುವುದರಿಂದ, ಹನುಮಂತ ನಂತೆ ನಿನಗೂ ಸಹಿಸಲಾಗದ ಹೆಚ್ಚಾದ ದುಃಖವುಂಟಾಗುವುದು.

ಟಿಪ್ಪಣಿ:—* ಸಾಮರ್ಥ್ಯವುಳ್ಳದ್ದಲ್ಲ.

‡ ದುಃಖಕಾಲದಲ್ಲಿ ಆಡುವ ಮಾತಿಗೆ ವಿಲಾಪವೆಂದು ಹೆಸರು. (ವಿಲಾಪ= ಅಳ್ಕೆ, ರೋದನ, ಅಳುವಿಕೆ.)

† ಹೆಚ್ಚಾಗಿ ದುಃಖಪಡುತ್ತಾಳೆ.

÷ ಜಗದೀಶ್ವರನಿಗೆ.

## ಪದ್ಯ ೨೪.

ದೃಷ್ಟ್ವಾ ತಸ್ಯಾಸ್ತ್ವಮಪಿ ಕರುಣಾಂ ತಾದೃಶೀಂ ತಾಮವಸ್ಥಾಂ
ಶಕ್ಷ್ಯಸ್ಯಂತಸ್ಸ್ವಯಮುಪನತಂ ಶೋಕವೇಗಂ ನ ಸೋಢುಂ ।
ಕ್ರವ್ಯಾದಾನಾಂ ದಶವದನವತ್ಕ್ವಾಪಿ ಜಾತಾವಜಾತಾಃ
ನಾಲಂಬಂತೇ ಕಥಮಿವ ದಯಾಂ ನಿರ್ಮಲತ್ವೋಪಪನ್ನಾಃ ॥

ಎಲೈ ಹಂಸವೇ, ಸೀತೆಯ ಆ ದೀನವಾದ ಭಯಂಕರಸ್ಥಿತಿಯನ್ನು ನೋಡಿ ನಿನ್ನ ಮನಸ್ಸಿನಲ್ಲಿ ಸಹಜವಾಗಿ ಹುಟ್ಟಿದ ಕ್ಲೇಶವನ್ನು ತಿರ್ಯಗ್ಜಾತಿಯಾದ ನೀನು ಸಹಿಸಲಾರೆ.

ರಾಕ್ಷಸರ, * ದಯಾಹೀನರಾದವರ, ಕುಲದಲ್ಲಿ ಹುಟ್ಟದೇ ಇರತಕ್ಕವರು ಎಂದರೆ:—ಒಳ್ಳೆಯ ಕುಲದಲ್ಲಿ ಹುಟ್ಟಿದ ನಿರ್ಮಲ ಸ್ವಭಾವದ ನಿಮ್ಮಂಥವರು, ಹೇಗೆತಾನೇ ದಯೆಯನ್ನು (ಆಕೆಗೆ) ತೋರಿಸುವುದಿಲ್ಲ?

ಮನುಷ್ಯರ ಮನಸ್ಸು ನಿರ್ಮಲವಾಗಬೇಕಾದರೆ ದಯಾಗುಣವಿದ್ದೇ ಇರಬೇಕು.

ಹಸೀಮಾಂಸ ತಿನ್ನುವಜಾತಿಯಲ್ಲಿ ಹುಟ್ಟಿದ ರಾವಣನಂಥವರು ಮಾತ್ರ ದಯಾವಂತರಾಗುವುದಿಲ್ಲ.

ತಿರ್ಯಗ್ಜಂತುವಾಗಿರುವುದೇ ದಯಾಹೀನತೆಗೆ ಕಾರಣವಾಗುವುದಿಲ್ಲ, ತಾಮಸಸ್ವಭಾವವೇ ಅದಕ್ಕೆ ಕಾರಣ.

ನಿರ್ಮಲತ್ವೋಪಪನ್ನಾಃ=ಬಿಳಿಯ ಬಣ್ಣವುಳ್ಳವರಿಂದೂ ಆಗುವುದು.

ಟಿಪ್ಪಣಿ:— * ಹಸೀಮಾಂಸತಿನ್ನುವವರ, ಹಸೀಮಾಂಸತಿನ್ನುವ ಪಕ್ಷಿಗಳ, ತಾಮಸ ಸ್ವಭಾವವುಳ್ಳವರ.

(ದಯೆಯುಂಟಾಗಬೇಕಾದರೆ ಚಿತ್ತನೈರ್ಮಲ್ಯವೇ ಕಾರಣ. ನಿನ್ನಲ್ಲಿ ಅದಿರುವುದರಿಂದ ಕೃಪೆಯುಂಟಾಗುವುದು.)

## ಪದ್ಯ ೨೫.

ನೇದೀಯಸ್ಯಾಮಧಿಗತರಸೋ ದೀರ್ಘಿಕಾಯಾಂ ನಿಕಾಮಂ
ಸಂವೇಶೇನ ಶ್ರಮಮಪನಯನ್ ಶರ್ವರೀಂ ಯಾಪಯೇಥಾಃ ।
ಇತ್ಥಂ ನಿದ್ರಾಸಮಯಮುಚಿತಂ ವೀಕ್ಷ್ಯ ನಕ್ತಂಚರೀಣಾಂ
ಪ್ರತ್ಯೂಷೇ ತ್ವಂ ಪ್ರಣಯಮಧುರಾಂ ಶ್ರಾವಯಿಷ್ಯನ್ ಮದುಕ್ತಿಂ ॥

ಬಹಳಹತ್ತಿರದಲ್ಲಿರುವ * ಕೃತ್ರಿಮ ಸರೋವರದಲ್ಲಿ ಮನಸ್ಸು ತಣಿಯುವಂತೆ ಪ್ರೀತಿಪೂರ್ವಕವಾಗಿ ನೀರನ್ನು ಕುಡಿ. ಹೆಚ್ಚುದೂರ ನಡೆದುದರಿಂದಾದ ಆಯಾಸವನ್ನು ನಿದ್ರೆಯಿಂದ ಹೋಗಲಾಡಿಸಿಕೊಂಡು ರಾತ್ರಿಯನ್ನು ಕಳೆಯಬೇಕು.

ಹಂಸವೇ, ನೀನು, ರಾತ್ರಿಯಲ್ಲೀ ಸಂಚರಿಸುವ ಸ್ವಭಾವವುಳ್ಳ ರಾಕ್ಷಸಸ್ತ್ರೀಯರು † ಸುಖವಾಗಿ ನಿದ್ದೆಮಾಡುವ ಹೊತ್ತನ್ನು ಚೆನ್ನಾಗಿ ಪರೀಕ್ಷಿಸಿನೋಡು. ಪ್ರೇಮದಿಂದ ಹಿತಕರವಾಗಿರುವ ನಾನು ಹೇಳಿಕಳುಹಿಸಿದ ಸಮಾಚಾರವನ್ನು ಬೆಳಗಿನಜಾವದಲ್ಲಿ ಮುಂದೆಹೇಳುವ ರೀತಿಯಲ್ಲಿ ಸೀತೆಗೆ ಹೇಳು.

ದೀರ್ಘಿಕಾಶಬ್ದದ ಸ್ತ್ರೀಲಿಂಗಸ್ವಾರಸ್ಯದಿಂದಲೂ, "ಅಧಿಗತರಸಃ ಸಂವೇಶೇನ" ಇತ್ಯಾದಿ ಶಬ್ದಸ್ವಾರಸ್ಯದಿಂದಲೂ, ಪ್ರಸ್ತುತವಾದ ರಾಜಹಂಸವೃತ್ತಾಂತದಿಂದ ಅಪ್ರಸ್ತುತವಾದ ದಂಪತಿಗಳ ವೃತ್ತಾಂತವು ತೋರಿಬರುತ್ತದೆ.

"ಸಂವೇಶ" ಶಬ್ದವು ಭೋಗವಾಚಕವೂ ಆಗುವುದು. ಇದಕ್ಕೆ ಆಧಾರವು ಹಲಾಯುಧಕೋಶವು.

ಟಿಪ್ಪಣಿ:—* ದೊಡ್ಡಕೊಳದಲ್ಲಿ.

‡ ಹಾಯಾಗಿ.

**ಪದ್ಯ ೨೬.**

ಶೀತೈರಧ್ವಶ್ರಮವಿನಯನೈಸ್ಸೇವಿತೋ ಗಂಧವಾಹೈಃ
ಸುಪ್ತಸ್ಸ್ವೈರಂ ಪುಳಿನಶಯನೇಸ್ವಂತರೇಚಂದ್ರಪಾದೈಃ ।
ಕ್ರೀಡಾಗೀತೈಃ ಕಮಲಮುಕುಳೇ ಲೀಯತಾಂ ಷಟ್ಪದಾನಾಂ
ಕಾರ್ಯಾಕಾಂಕ್ಷೀ ಕಲಯತು ಭವಾನ್ ರಾಜಹಂಸ ಪ್ರಬೋಧಂ ||

ತಂಪಾಗಿರುವುದರಿಂದಲೇ, ದಾರಿನಡೆದ ಆಯಾಸವನ್ನು ಹೋಗಲಾಡಿಸುವ ಮಂದಮಾರುತದಿಂದ ಸೇವಿತನಾಗು.

ಚಂದ್ರಕಿರಣಗಳಿಂದ ಸೊಗಸುತ್ತಿರುವ ಅದರ ಮಧ್ಯಭಾಗದಲ್ಲಿ ನೀರಿನಿಂದಾದ ಮರಳುದಿಣ್ಣೆಯೆಂಬ ಹಾಸಿಗೆಯಲ್ಲಿ ಮನಸ್ಸೊಪ್ಪುವಂತೆ ಆಯಾಸಪರಿಹಾರವಾಗುವವರೆಗೆ ಮಲಗಿಕೋ.

ಆಮೇಲೆ, ನೀನು ಅಲ್ಲಿ * ಅಡಗಿಕೊಂಡಿರು.

ರಾಜಹಂಸವೇ, ‡ ದೃಢಸಂಕಲ್ಪವುಳ್ಳ ನೀನು, ತಾವರೆಯ, ಸ್ವಲ್ಪ ಅರಳಿರುವ ಮೊಗ್ಗಿನಲ್ಲಿ ಇರುವ ಅಥವಾ ಸಂಚರಿಸುತ್ತಿರುವ ದುಂಬಿಗಳ ವಿಹಾರದ ಝೇಂಕಾರದಿಂದ ಎಚ್ಚರಗೊಳ್ಳು.

ಪ್ರಸ್ತುತವಾದ ರಾಜಹಂಸ ಪ್ರಬೋಧವೃತ್ತಾಂತದಿಂದ ಅಪ್ರಸ್ತುತವಾದ ರಾಜನನ್ನು ಎಚ್ಚರಗೊಳಿಸುವ ವೃತ್ತಾಂತವು ಸೂಚಿತವಾಗುವುದು.

ಟಿಪ್ಪಣಿ:—* ಮಳಲಿನಂತೆ ನಿನಗೂ ಬಿಳಿಯ ಬಣ್ಣವಿರುವುದರಿಂದ ಅದಕ್ಕಿಂತ ನೀನು ಬೇರೆಯಾದವನೆಂಬ ಭೇದವೇ ಕಾಣುವುದಿಲ್ಲ.

‡ ಉದ್ದೇಶಪಟ್ಟ ಕೆಲಸವನ್ನು ಜಿಡವೆ ನೆರವೇರಿಸುವುದರಲ್ಲಿ ಕುತೂಹಲವುಳ್ಳ. ಶೈತ್ಯಸೌರಭ್ಯಮಾಂದ್ಯ ಗುಣಯುಕ್ತವಾದ ಗಾಳಿಬೀಸುವುದರಿಂದ ಸುಖಪಡು.

## ಪದ್ಯ ೨೭.

ತಾಮಾರೂಢಶ್ಚಲಕಿಸಲಯಾಂ ಶಿಂಶುಪಾಂ ಸ್ವೈರಕಲಕ್ಷ್ಯೈಃ
ಮಂದೀಕುರ್ವನ್ ಮನಸಿಜಧನುರ್ಘೋಷ ತೀವ್ರಂ ಪ್ರಣಾದಂ |
ಮೋಹಾದೀಷನ್ ಮುಷಿತಮನಸಂ ಬೋಧಯ ಪ್ರೇಯಸೀಂ ಮೇ
ರಮ್ಯಾಮಾದೌ ರಘುಜನಕಯೋ ವರ್ಣಯನ್ ವಂಶಕೀರ್ತಿಂ ||

ಅಲುಗುತ್ತಿರುವ ಚಿಗುರುಳ್ಳ ಆ ಅಗರು ವೃಕ್ಷವನ್ನು ಹತ್ತಿ ಮತ್ತಾರಿಗೂ ಕಾಣಿಸದಂತೆ ಕುಳಿತುಕೋ.

ಮನ್ಮಥನ ಧನುಷ್ಟಂಕಾರದಂತೆ * ತೀವ್ರನಾದ ನಿನ್ನ ಧ್ವನಿಯನ್ನು ಸ್ವಲ್ಪ ‡ ಮೆಲ್ಲನೆಯದನ್ನಾಗಿ ಮಾಡಿಕೋ.

ನನ್ನ ಸಂದೇಶವನ್ನು ಸೀತೆಗೆ ತಿಳಿಯಪಡಿಸುವುದಕ್ಕೆ ಮೊದಲು ಆಕೆಯ ಮನಸ್ಸನ್ನು ಆಕರ್ಷಿಸುವ ರಘುಜನಕರಾಜರ ವಂಶಗಳ ಯಶಸ್ಸನ್ನು ವರ್ಣಿಸಿ, ಹಂಸವೇ, ಮೋಹದಿಂದ ಸಹಜವಾಗಿಯೇ ಸ್ವಲ್ಪ ವ್ಯತ್ಯಾಸಹೊಂದಿರುವ ಮಾನಸೆಯಾದ ನನ್ನ ಪ್ರೇಯಸಿಯನ್ನು, ನಿನ್ನನ್ನು ನೀನು, ನನ್ನಸಂದೇಶ ತಂದಿರುವವನನ್ನಾಗಿ ಅವಳಿಗೆ ತಿಳಿಸಿ, † ನಿನ್ನ ವಿಷಯದಲ್ಲಿ ನಂಬಿಕೆಯಿಡುವವಳನ್ನಾಗಿ ಮಾಡು.

ಟಿಪ್ಪಣಿ:—* ಹೆಚ್ಚುದೂರಕೇಳಿಸುವ.
‡ ತಗ್ಗಿಸಿಕೋ.
† ನಿನ್ನನ್ನು ನಂಬುವಂತೆಮಾಡು, ಮಾಯಾವಿಗಳೆಂದು ತಪ್ಪುತಿಳಿವಳಿಕೆಯಿಲ್ಲದವಳನ್ನಾಗಿ.

## ಪದ್ಯ ೨೮.

ಪತ್ಯುರ್ದೇವಿ ಪ್ರಣಯಸಚಿವಂ ವಿದ್ಧಿ ದೀರ್ಘಾಯುಷೋ ಮಾಂ
ಜೀವಾತುಂ ತೇ ದಧತಮನಘಂ ತಸ್ಯ ಸಂದೇಶಮಂತಃ |
ಶೂರಾಣಾಂ ಯಶ್ಶರದುಪಗಮೋ ವೀರಪತ್ನೀವರಾಣಾಂ
ಸಮ್ಮಾನಾರ್ಹಂ ಸಮಯಮುಚಿತಂ ಸೂಚಯೇತ್ ಕೂಜಿತೈಸ್ಸ್ವೈಃ ||

ಪಟ್ಟದರಾಣಿಯಾಗುವವಳೇ, ಈ ಸ್ಥಿತಿಯಲ್ಲಿರುವ ನಿನ್ನ, ಜೀವನೌಷಧವಾದ, ಎಲ್ಲ ದುಃಖಗಳನ್ನೂ ಹೋಗಲಾಡಿಸಬಲ್ಲ ಪ್ರಾಣಪ್ರಿಯನ ಸಂದೇಶವನ್ನು ಮನಸ್ಸಿನಲ್ಲಿಟ್ಟುಕೊಂಡಿರುವ ನನ್ನನ್ನು, ಚಿರಂಜೀವಿಯಾದ ನಿನ್ನಪತಿ ರಾಮನ ಪ್ರೀತಿಪಾತ್ರ ಸ್ನೇಹಿತನನ್ನಾಗಿ ತಿಳಿ.

ಹಂಸವು, ಶರತ್ಕಾಲದಲ್ಲಿ ಶೂರಪತ್ನಿಯರಿಗೂ, ವೀರರಿಗೂ ಮರ್ಯಾದಾರ್ಹವಾದ ತಕ್ಕ ಸಮಯವನ್ನು ತನ್ನ ಧ್ವನಿಗಳಿಂದ ಸೂಚಿಸುತ್ತದೆ.

ವೀರಪತ್ನಿಯರು, ತಮ್ಮ ವೀರಪತಿಗಳಿಗೆ ಯುದ್ಧಕ್ಕೆ ಹೊರಡಲು ಪ್ರೋತ್ಸಾಹಕೊಡಬೇಕೆಂದೂ, ಶೂರರಾದ ಕ್ಷತ್ರಿಯರು ತಮ್ಮ ಶತ್ರುಗಳಮೇಲೆ ದಂಡಯಾತ್ರೆ ಹೊರಡಲು ಸಿದ್ಧರಾಗಲೇಬೇಕೆಂದೂ * ಸೂಚಿಸುತ್ತದೆ.

ಟಿಪ್ಪಣಿ:—* ನೆನಪಿಗೆ ತರುತ್ತವೆ.

## ಪದ್ಯ ೨೯.

ಇತ್ಪ್ರಸ್ತಾವಪ್ರವಣಮಥ ಸಾ ಮೈಥಿಲೀ ಮಾನಯೇತ್ತ್ವಾಂ
ಮ್ಲಾನಂ ಶೋಕಾತ್ ವದನಕಮಲಂ ಕಿಂಚಿದುನ್ನಮ್ಯ ಭೀರುಃ।
ಅಂತಸ್ತೋಷಾತ್ ಅಮೃತಲಹರೀಲಬ್ಧಸಬ್ರಹ್ಮಚರ್ಯೈಃ
ಅಂಭೋಜಾನಾಮುಷಸಿ ಮಿಷತಾಮಂತರಂಗೈರಪಾಂಗೈಃ॥

ನೀನು, ನನ್ನ ಪ್ರಿಯಳಿಗೆ ನಿನ್ನ ವೃತ್ತಾಂತವನ್ನು ತಿಳಿಯಪಡಿಸಿದ ತರುವಾಯ ದೀನದೆಸೆಯಲ್ಲಿರುವ ಬಹು ಮೇಧಾವಿನಿಯಾದ ಸೀತೆಯು, * ಹೆದರಿ, ದುಃಖದಿಂದ ಬಾಡಿದ ಮುಖಕಮಲವನ್ನು ಮೇಲಕ್ಕೆತ್ತುವಳು.

ಆಮೇಲೆ, ನನ್ನ ವೃತ್ತಾಂತವರ್ಣನದಲ್ಲಿ ‡ ಆಸಕ್ತವಾದ ನಿನ್ನನ್ನು ಹೆಚ್ಚಾದ ಆನಂದದಿಂದ ಅಮೃತ ಪ್ರವಾಹಕ್ಕೆ ಸಮನಾದ, ಬೆಳಗಿನ ಜಾವದಲ್ಲಿ ಅರಳುವ ಕಮಲಗಳಂತಿರುವ † ಕಟಾಕ್ಷಗಳಿಂದ, ಆವಶ್ಯಕವಾಗಿ ಬಹುಮಾನಿಸುವಳು.

ಇದರಿಂದ ಹನುಮಂತನಿಗಿಂತಲೂ, ಸೀತಾದೇವಿಯು ನಿನ್ನಲ್ಲಿಯೇ ಹೆಚ್ಚು ಪ್ರೀತಿಯನ್ನು ತೋರಿಸುವಳೆಂದು ಸೂಚಿತವು. ಏಕೆಂದರೆ ಹನುಮಂತನಿಗೆ ದರ್ಶನಮಾತ್ರವೇ ಉಂಟಾಯಿತು. ಹಂಸವಾದ ನಿನಗಾದರೋ, ಬಹುಮಾನದೊಡನೆ ಕೂಡಿದ, ದರ್ಶನ ಲಾಭವುಂಟಾಗುವುದು.

ಟಿಪ್ಪಣಿ:—* ಈ ಪಕ್ಷಿಯು ಆಡುವ ಮಾತು ಈ ರಾಕ್ಷಸಿಯರ ಕಿವಿಗೆ ಎಲ್ಲಿ ಬೀಳುವುದೋ ಎಂದು.

‡ ತೊಡಗಿರುವ.

† ಕಡೆಗಣ್ಣಿನ ನೋಟ.

**ಪದ್ಯ ೩೦.**

ಪಶ್ಯಂತೀ ಸಾ ರಘುಪತಿವಧೂಸ್ತ್ವಾಮಶೇಷಾವದಾತಂ
ಪ್ರತ್ಯಾಶ್ವಾಸಾತ್ ಅಧಿಗತರುಚಿಃ ಪ್ರಾಕ್ತನೀವೇಂದುಲೇಖಾ |
ಮತ್ಸಂದೇಶೇ ತದನು ಸುಮುಖೀ ಸಾವಧಾನಾ ಭವಿತ್ರೀ
ಕಿಂ ನ ಸ್ತ್ರೀಣಾಂ ಜನಯತಿ ಮುದಂ ಕಾಂತವಾರ್ತಾಽಽಗಮೋಽಪಿ ||

ಸೀತೆಯು, ಶುಭ್ರವೃತ್ತಾಂತ ಹೇಳುತ್ತಿರುವ ನಿನ್ನನ್ನು * ಎಲ್ಲ ಭಾಗಗಳಲ್ಲೂ ಶುದ್ಧನನ್ನಾಗಿ ತಿಳಿಯುವಳು.

ಆದುದರಿಂದಲೇ ನಂಬಿಕೆಯಿಂದ, ಸೂರ್ಯಕಿರಣಗಳ ಸಂಬಂಧದಿಂದ ಅಭಿವೃದ್ಧಿಹೊಂದಿರುವ ‡ ಹಿಂದಿನ ದಿನದಲ್ಲಿ ಹುಟ್ಟಿದ ಚಂದ್ರಕಲೆಯಂತೆ ಕಾಂತಿಯನ್ನು ಪಡೆದಿರುವಳು.

ಹಂಸದಮೂಲಕ ಬಂದ ಸಮಾಚಾರವನ್ನು ಕೇಳುವುದರಲ್ಲಿ ಆಶೆಯುಳ್ಳ ಅಥವಾ ಶುಕ್ಲಪಕ್ಷದ ಪಾಡ್ಯಬಿದಿಗೆಗಳಲ್ಲಿ ಹುಟ್ಟಿರುವ ಇಂದುವಿನ ಕಲೆಯಂತೆ ಕಾಂತಿಗೊಂಡವಳಾದುದರಿಂದಲೇ, ಪ್ರಸನ್ನ ವದನೆಯೂ ಆಗಿ ಆಮೇಲೆ ನನ್ನ ಸಂದೇಶ ಕೇಳುವುದರಲ್ಲಿ ಗಮನ ವಿಡುವಳು.

ಪ್ರಿಯನ ವೃತ್ತಾಂತದ † ಲಾಭವು ವಿರಹಿಣಿಯರಿಗೆ ಅವಶ್ಯಕ ವಾಗಿ ಹೆಚ್ಚು ಪ್ರೀತಿಯನ್ನುಂಟುಮಾಡುತ್ತದೆ.

ಸಾಕ್ಷಾತ್ ಪ್ರಿಯಸಮಾಗಮವೇ, ಅಗಲಿದ ಸ್ತ್ರೀಯರಿಗೆ ಮನಸ್ಸಂತೋಷಕರವಲ್ಲ, ಅವನ ಸಮಾಚಾರವನ್ನು ತಿಳಿಯುವುದೂ ಸಂತೋಷಕರವೇ.

ಟಿಪ್ಪಣಿ:—* ಒಳಗೂ, ಹೊರಗೂ.

‡ ಬಹಳ ಸಣ್ಣದಾಗಿರುವ ಚಂದ್ರಕಲೆಯು ಸೂರ್ಯನ ಪ್ರಭೆಯ ಅನುಪ್ರವೇಶ ದಿಂದ ಉತ್ತಮವಾದ ಸೌಭಾಗ್ಯವನ್ನು ಪಡೆದು ಶುಕ್ಲಪಕ್ಷದ ಪಾಡ್ಯ ಬಿದಿಗೆಗಳಲ್ಲಿ ಏಳಿಗೆಯಾಗುತ್ತಿರುವ ಕಲೆಯುಳ್ಳದ್ದಾಗುತ್ತದೆ.

ಹಾಗೆ ನಿನ್ನನ್ನು ನೋಡುವುದಕ್ಕೆ ಮೊದಲು, ಅವ್ಯಕ್ತವಾದ ಕಲೆಯುಳ್ಳ ಚಂದ್ರರೇಖೆಯಂತೆ ವರ್ಣಿತಳಾದ ಆಕೆಯೇ, ನೀನು ನನ್ನ ಸಮಾ ಚಾರವನ್ನು ಸ್ಪಷ್ಟಪಡಿಸಿದ ಮೇಲೆ, ನಿನ್ನಲ್ಲಿ ನಂಬುಗೆಯುಂಟಾದುದ ರಿಂದ ಸಂತೋಷಪಟ್ಟು ಸ್ವಲ್ಪಸ್ವಲ್ಪವಾಗಿ ಹೊಳೆಯುತ್ತಿರುವ ಕಾಂತಿಯುಳ್ಳವಳಾಗುವಳು.

† ತಿಳಿಯೋಣವು..

### ಪದ್ಯ ೩೧.

ಪಶ್ಚಾದೇವಂ ಕಥಯ ಭವತೀಭಾಗಧೇಯೇನ ಜೀವನ್<br>
ಕಲ್ಯಾಣೀಂ ತ್ವಾಂ ಕುಶಲಮನಘಃ ಕೋಸಲೇಂದ್ರೋಽನುಯುಙ್ಕ್ತೇ ।<br>
ಯೇಷು ಶ್ರೇಯೋ ಭವತಿ ನಿಯತಂ ತಾನಿ ಸರ್ವಾಣಿ ಸಂತಃ<br>
ಲಕ್ಷ್ಮ್ಯಾದೇವ್ಯಾಸ್ತವ ಚ ಭುವನೇ ಲಕ್ಷಣಾನ್ಯಾಮನನ್ತಿ ॥

ಸೀತೆಗೆ ನಿನ್ನಲ್ಲಿ ನಂಬಿಕೆಯುಂಟಾದಮೇಲೆ ಹೀಗೆ ಹೇಳು:—

ನಿನ್ನ ಸೌಭಾಗ್ಯದಿಂದಲೇ ಬದುಕಿರುವನು. ಕ್ಷೇಮವಾಗಿದ್ದಾನೆ. ಕೋಸಲರಾಜ್ಯಾಧಿಪತಿಯಾಗಿರುವ ರಾಮನು, ಮಂಗಳಕರಳಾದ ನಿನ್ನ ಕ್ಷೇಮಸಮಾಚಾರವನ್ನು ನನ್ನಮೂಲಕ ಪ್ರಶ್ನಿಸುತ್ತಾನೆ.

"ಜಗತ್ತಿನಲ್ಲಿ ಯಾವ ಒಳ್ಳೆಯ ಲಕ್ಷಣಗಳಿರಲಾಗಿ, ಶುಭ ವುಂಟಾಗುತ್ತದೋ, ಆ ಎಲ್ಲ ಉತ್ತಮವಾದ ಲಕ್ಷಣಗಳು ಮಹಾ ಲಕ್ಷ್ಮಿಯಲ್ಲೂ * ಪಟ್ಟಮಹಿಷಿಯಾಗಲು ಯೋಗ್ಯತೆಯುಳ್ಳ ನಿನ್ನಲ್ಲೂ (ನಿಮ್ಮಿಬ್ಬರಲ್ಲೇ) ಉಚಿತವಾಗಿ ಹೊಂದಿಕೊಂಡಿವೆ" ಎಂದು ಸತ್ಪುರುಷರಾದ ವಿದ್ವಾಂಸರು ಅಡಿಗಡಿಗೆ ಹೇಳುತ್ತಾರೆ. ಏಕೆಂದರೆ:- ನಿಮ್ಮಿಬ್ಬರಿಗಿಂತಲೂ ಬೇರೆಯಾದ ಮತ್ತೊಬ್ಬರಿಗೆ ಈ ಸಲ್ಲಕ್ಷಣ ಗಳಿಂದ ಕೂಡಿರುವುದು ಅಸಾಧ್ಯವು.

ಟಿಪ್ಪಣಿ:—* ಪಟ್ಟದ ರಾಣಿಯಾಗಲು,

ಕ್ಷೇಮವಾಗಿದ್ದಾನೆ, ಕ್ಷೇಮಿಯಾಗಿದ್ದಾನೆ, ಕುಶಲಿಯಾಗಿದ್ದಾನೆ.

## ಪದ್ಯ ೩೨.

ಯಸ್ಯಾ ಯಸ್ಮಿನ್ ವ್ಯವಧಿರಭವತ್ ಭೂಷಣಾಲೇಪನಾದಿಃ
ನೀತಾಮೇನಾಂ ನಿಯತಿವಿಭವಾತ್ ಅಂತರೀಪಂ ದವೀಯಃ ।
ಪ್ರತ್ಯಾಸೀದನ್ನಿವ ನಯನಯೋರ್ವರ್ತ್ಮನಿ ಸ್ಥಾಪಯಿತ್ವಾ
ಸ ತ್ವಾಮೇವಂ ವದತಿ ಕುಶಲೀ ದೇವಿ ಸಖ್ಯಾ ಮುಖೇನ ॥

ಸೀತೆಯೇ, ನಿನಗೆ ನನ್ನವಿಷಯದಲ್ಲಿ ಆಭರಣಗಂಧಾದಿ ಉದ್ದೀಪನಸಾಮಗ್ರಿಯು ಕೂಡ ತಡೆಯನ್ನುಂಟುಮಾಡಿತ್ತು. ಎಂದರೆ:— ಎಲ್ಲ ಅವಯವಗಳ ಸಂಸ್ಪರ್ಶಸುಖಕ್ಕೆ ತಡೆಯುಂಟುಮಾಡುವುದರ ಮೂಲಕ ಸೂಕ್ಷ್ಮವಾದ ಅಡ್ಡಿಯೂ ಸಹಿಸಲಾಗದಂತಾಗಿತ್ತು.

ಹೀಗಿರುವ ನಿನ್ನನ್ನು ಸರ್ವೇಶ್ವರನ ಇಷ್ಟದಿಂದ ರಾವಣನು ಅಪಹರಿಸಿ, ಬಹಳ ದೂರದಲ್ಲಿರುವ ಲಂಕಾದ್ವೀಪಕ್ಕೆ ನಿರ್ಬಂಧದಿಂದ ಕರೆದುಕೊಂಡು ಹೋದನು.

ಇಂಥ ನಿನ್ನನ್ನು, ನಿನ್ನ ಪ್ರಿಯನು ಕ್ಷೇಮವಾಗಿದ್ದುಕೊಂಡು ನಿನ್ನ ಸಮೀಪವನ್ನು * ಸೇರಿದನೋ ಎಂಬಂತೆ ಸ್ನೇಹಿತನಾದ ‡ ನನ್ನ ಮೂಲಕ ಮುಂದಿನಕ್ರಮದಲ್ಲಿ ಮಾತನಾಡುತ್ತಾನೆ.

ಟಿಪ್ಪಣಿ:—* ಯಾವಾಗಲೂ ಧ್ಯಾನಮಾಡುವುದರಿಂದ ತನ್ನ ಕಣ್ಣಾರೆ ನೋಡುತ್ತ.
‡ ಸ್ನೇಹಿತನೆಂಬ ಮುಖದಿಂದ. ಕ್ಷೇಮವಾಗಿದ್ದುಕೊಂಡು=ಕುಶಲಿಯಾಗಿದ್ದು ಕೊಂಡು, ಕ್ಷೇಮಿಯಾಗಿದ್ದು.

## ಪದ್ಯ ೩೩.

ವೇಲಾತೀತಪ್ರಣಯವಿವಶಂ ಭಾವಮಾಸೇದುಷೋರ್ನೌ
ಭೋಗಾರಂಭೇ ಕ್ಷಣಮಿವ ಗತಾ ಪೂರ್ವಮಾಲಿಂಗನಾದ್ಯೈಃ ।
ಸಂಪ್ರತ್ಯೇಷಾ ಸುತನು ಶತಶಃ ಕಲ್ಪನಾಸಂಗವೃತ್ತೈಃ
ಚಿಂತಾದೀರ್ಘೈರಪಿ ಶಕಲಿತಾ ಶರ್ವರೀ ನಾಪಯಾತಿ ॥

ಮನೋಹರಾಂಗಿಯೇ, ನಾನು ನಿನ್ನನ್ನು ಅಗಲುವುದಕ್ಕೆ ಮೊದಲು, * ಬಹಳ ಹೆಚ್ಚಾದ ಪ್ರೇಮಪರವಶವಾಗಿರುವ ಶೃಂಗಾರ ರಸಸ್ಥಾಯಿ ಭಾವವನ್ನು ಪಡೆದಿರುವ ನಮ್ಮಿಬ್ಬರ ಭೋಗದ ಆದಿ ಭಾಗದಲ್ಲೇ ಆಶ್ಲೇಷ ಮೊದಲಾದುವುಗಳಿಂದ ಬಹು ಸ್ವಲ್ಪಕಾಲ ದಂತೆ ‡ ರಾತ್ರಿಯು ತಾನಾಗಿಯೇ ಕಳೆದುಹೋಯಿತು.

ಆದು, ಈಗ, ಚಿಂತೆಯಿಂದ † ಬಹಳ ದೊಡ್ಡದಾಗಿರುವ ನನ್ನ ಮನದಲ್ಲಿ ಏರ್ಪಡಿಸಿಕೊಂಡಿರುವ ನಿನ್ನ ವಿಷಯಕವಾದ ÷ ಸಂಗಮ ಗಳಿಂದಲೂ, ಚೂರುಚೂರಾಗಿ ಮಾಡಲ್ಪಟ್ಟು ಕಳೆದುಹೋಗುವು ದಿಲ್ಲವಲ್ಲಾ.

ಟಿಪ್ಪಣಿ:—* ದಡಮೀರಿದ.
‡ ರಾತ್ರಿಯು ಕ್ಷಣದಂತೆ ತಾನಾಗಿಯೇ ಕಳೆದುಹೋಯಿತು.
† ಕೊನೆಯಿಲ್ಲದಿರುವ.
÷ ಭೋಗ.

## ಪದ್ಯ ೩೪.

ಉದ್ದಾವೈಸ್ತೈಃ ಕುಚಕಲಶಯೋರೂಷ್ಮಭಿರ್ನಿರ್ಜಿತೇನ
ಛಿದ್ರಂ ಲಬ್ಧ್ವಾ ವಿರಹಸಮಯೇ ತತ್‌ಕ್ಷಣಾದುನ್ನತೇನ।
ಕುಂದಾಮೋದೈಸ್ಸುರಭಿತದಿಶಾ ಗಂಧವಾಹೇನ ದೈನ್ಯಂ
ಸಂಪ್ರಾಪ್ತೋಽಹಂ ಸಹ ಸರಸಿಜೈಸ್ತ್ವನ್‌ಮುಖಾಂಭೋಜಮಿತ್ರೈಃ॥

ನಾನು, ನಿನ್ನೊಡನಿದ್ದಾಗ ನಿನ್ನ ಉರೋಜಗಳ ಅಪರಿಮಿತವಾದ ಊಷ್ಮದಿಂದ, ಶಿಶಿರಕಾಲದ ಮಾರುತನು ನನ್ನಿಂದ ಸಂಪೂರ್ಣವಾಗಿ, ಪರಾಜಿತನಾಗಿದ್ದನು.

ಆ ಕಾರಣದಿಂದಲೇ ಅವನು * ಈಗ ಅವಕಾಶವೊದಗಿದುದರಿಂದ ಬೇಗ ಮಾಘಮಲ್ಲಿಗೆ ಪುಷ್ಪಗಳ ವಾಸನೆಯಿಂದ ಎಲ್ಲೆಲ್ಲೂ ಪರಿಮಳವನ್ನು ಹರಡುತ್ತಾ ನನ್ನನ್ನು ಇದಿರಿಸುತ್ತಾನೆ.

ಅಷ್ಟೇ ಅಲ್ಲದೆ, ಅವನು ನಿನ್ನ ವದನಾರವಿಂದಕ್ಕೆ ಸಮಾನವಾದ ಅಂಬುಜಗಳೊಡನೆ ನನ್ನನ್ನು ಹೀನಸ್ಥಿತಿಗೆ ತಂದಿದ್ದಾನೆ.

ಟಿಪ್ಪಣಿ:—* ವಿರಹಕಾಲದಲ್ಲಿ.

‡ ಹೇಮಂತಕಾಲದಂತೆ ಶಿಶಿರಕಾಲದಲ್ಲೂ ಹೆಚ್ಚಾದ ಮಂಜಿನಿಂದ ಕೇಡಿಗೆ ಈಡಾದ ಸರಸಿಜಗಳಿಗೆ ಹೀನಸ್ಥಿತಿ ಬಂದಿರುವುದರಿಂದ ಅವುಗಳೊಡನೆ ನಾನೂ ಆ ಸ್ಥಿತಿಗೆ ಬಂದಿದ್ದೇನೆ.

ನಿನ್ನ ವಕ್ಷೋಜಗಳ ಊಷ್ಮದಿಂದ ಸಹಾಯಪಡೆದ ನನ್ನಿಂದ, ಹಿಂದೆ ಸೋತುಹೋದ ಶಿಶಿರವಾಯುವು, ನಿನ್ನ ವಿರಹವೆಂಬ ಸಮಯಲಾಭದಿಂದ ಈಗ ಬಲಹೊಂದಿ, ದ್ವೇಷದಿಂದ ನಿನ್ನ ಮುಖಕಮಲಗಳ ಸ್ನೇಹಿತಗಳಾದ ಅಂಭೋಜಗಳೊಡನೆ ನನ್ನನ್ನು ಇನ್ನೂ ಕೀಳುಸ್ಥಿತಿಗೆ ತಂದಿರುತ್ತಾನೆ.

ಇದರಿಂದಲಾದರೋ, ನಿನ್ನ ಮುಖಪದ್ಮಸಂದರ್ಶನಭಾಗ್ಯದಿಂದ ಹೀನನಾಗಿದ್ದರೂ ಅದಕ್ಕೆ ಸಮನಾದ ಸರಸಿಜದರ್ಶನದ ವಿನೋದವು ಶಿಶಿರಕಾಲದ ಗಂಧವಾಹನಿಂದ ದೂರವಾಯಿತೆಂದು ನಿರ್ವೇದವು.

ತಕ್ಕ ಸಾಮಗ್ರಿಗಳಿಂದ ಕೂಡಿಕೊಂಡ ಪ್ರಸಿದ್ಧವೀರನಿಂದ ಹಿಂದೆ ಅನೇಕಸಲ ಸೋತವನು, ಈಗ ತನ್ನ ಹಿಂದಿನಶತ್ರುವಿಗೆ ಕಷ್ಟವೊದಗಿರುವಾಗ ಅವನ ಮೇಲೆ ತನ್ನ ಶಕ್ತಿಯನ್ನು ಪ್ರಯೋಗಿಸುತ್ತಿರುವನೆಂಬ ವೃತ್ತಾಂತವು ಇಲ್ಲಿ ತೋರಿಬರುತ್ತದೆ.

ರಾಮನು ಸೀತಾಸಹಿತನಾಗಿದ್ದಾಗ ಶಿಶಿರವಾಯುವನ್ನು ಲಕ್ಷ್ಯಕ್ಕೆ ತರುತ್ತಿರಲಿಲ್ಲ. ಈಗ ಸೀತಾರಹಿತನಾಗಿರುವ ಅವನನ್ನು ಶಿಶಿರಮಾರುತನು ಹಿಂದಿನ ಶತ್ರುತ್ವದಿಂದ ಪೀಡಿಸುತ್ತಿದ್ದಾನೆ.

## ಪದ್ಯ ೩೫.

ಮಾಧ್ವೀದಿಗ್ಧೈರ್ವಿರಹಿವನಿತಾಸ್ವಾದಲುಬ್ಧೈರಮೋಘೈಃ
ಆವೃಣ್ವನ್ತಂ ಕುಸುಮಧನುಷಶ್ಚಿತ್ರಪುಂಖೈರ್ದಿಗಂತಾನ್ ।
ಸೀತಾಪಾರ್ಶ್ವೇ ನ ಭವತು ಭವಾನಿತ್ಯವೋಚದ್ವಸಂತಂ
ರಾಮಸ್ತ್ರಾಸಾತ್ ಅನಮಿತಧನುರ್ಮೌಳಿನಾ ಸನ್ನತೇನ ॥

ಪರಾಕ್ರಮಿಯಾದ ರಾಮನು, ವಸಂತನನ್ನು ಕುರಿತು ಹೆದರಿಕೆಯಿಂದ ತಲೆಬಗ್ಗಿಸಿಕೊಂಡು ಹೀಗೆ ಹೇಳಿದನು.

ಎಲೈ ವಸಂತನೇ, ನಿನ್ನ ಸ್ನೇಹಿತನಾದ ಮನ್ಮಥನ ಬಾಣಗಳು, ಮಾಧ್ವೀಪುಷ್ಪಗಳ ಮಕರಂದದಿಂದ ಅದ್ದಲ್ಪಟ್ಟವೆಯಾದುದರಿಂದ ವಿರಹಿಣಿಯರನ್ನು ಹೆಚ್ಚುಕಷ್ಟಕ್ಕೆ ಗುರಿಮಾಡುವ ಸ್ವಭಾವವುಳ್ಳವು. ಗುರಿಯನ್ನು ತಪ್ಪದೆ ಕೆಡಹತಕ್ಕವು.

* ಅವನ ಇಂತಹ ತೀಕ್ಷ್ಣವಾದ ಬಾಣಗಳಿಂದ ನೀನು ಎಲ್ಲ ಪ್ರದೇಶಗಳನ್ನೂ ಆಕ್ರಮಿಸುತ್ತಾ ಇದ್ದೀಯೆ.

ನೀನು, ಮನ್ಮಥಸಹಾಯದಿಂದ ಹೆಚ್ಚಾದ ಪರಾಕ್ರಮವನ್ನು ಹೊಂದಿ ಜಯವನ್ನು ಪಡೆದು ಶ್ಲಾಘಿತನಾದುದರಿಂದ ನನಗೆ ಭಯವುಂಟಾಗಿದೆ. ಇದರಿಂದ ನಾನು ಈಗ ಧನುಸ್ಸಿಗೆ ಹೆದೆಯನ್ನೇರಿಸದೆ ನಿನ್ನಮುಂದೆ ತಲೆಬಗ್ಗಿಸಿ, ವಸಂತನೇ, ಬೇಕಾದರೆ ನೀನು, ನನ್ನ ಪಕ್ಕದಲ್ಲಿ ನಿಲ್ಲಬಹುದು, ವಿರಹದೀನೆಯಾದ ಸೀತೆಯ ಸಮೀಪಕ್ಕೂ ಹೋಗಬೇಡವೆಂದನು.

ಟಿಪ್ಪಣಿ:—* ವಸಂತಕಾಲದಲ್ಲಿ ಎಲ್ಲೆಲ್ಲೂ ಪರಿಮಳವುಳ್ಳ ಮಾಧ್ವೀಪುಷ್ಪಗಳು ಕಣ್ಗೊಳಿಸುತ್ತಿವೆ.

ಅಮೃತದಂತೆ ರುಚಿ ನೋಡಲು ತಕ್ಕ ಮಾಧ್ವಿಯ ಪುಷ್ಪರಸದಿಂದಲೇ ಅದ್ದಲ್ಪಟ್ಟಿದ್ದರೂ ವಿರಹಿವನಿತೆಯರನ್ನು ಕಾಡಿಸುವುದರಲ್ಲಿ ಆತ್ಯಾಶೆಯುಳ್ಳ, ಸಿಹಿಯಾಗಿಯೇ ಇರುವ ಜೇನುತುಪ್ಪದಲ್ಲಿ ಅದ್ದಿದಬಾಣಗಳಿಂದಲೇ ಬೇಟೆಗಾರರು ಜಿಂಕೆಗಳನ್ನೋಪಾದಿಯಲ್ಲಿ ಮಾಧ್ವಿಯ ಹೂಗಳು ವಿರಹಿಣಿಯರನ್ನು ನುಂಗಿಹಾಕುತ್ತವೆ. ವಿಷದಿಂದ ಅದ್ದಲ್ಪಟ್ಟಿದ್ದರೆ ಹೇಳತಕ್ಕದ್ದೇನು ?

ಮೃದುವಾದ ಬಾಣ, ಧನುಸ್ಸು ಮೊದಲಾದ ಆಯುಧಗಳು ಇರುವಾಗಲೇ ಹೀಗೆ ವಿರಹಿಣಿಯರ ಪ್ರಾಣಗಳನ್ನು ಹೀರುತ್ತಿರುವಲ್ಲಿ ಬಹು ಹರಿತವಾದ ಆಯುಧಗಳಿದ್ದರೆ ಹೇಳಬೇಕಾದ್ದೇ ಇಲ್ಲ. ಇದರಿಂದ ಅವುಗಳ ಹೆಚ್ಚಾದ ಕ್ರೌರ್ಯವು ಕಾಣಬರುತ್ತದೆ.

"ನೀನು, ಸೀತೆಯ ಸಮೀಪಕ್ಕೆ ಹೋದರೆ ಆಗ, ಅವಳು ದುಃಖಿಸಿ ಜೀವಿಸುವುದು ಅಸಾಧ್ಯವಾಗಬಹುದು. ಆದುದರಿಂದ ನನ್ನಲ್ಲಿ ದಯೆಯಿಟ್ಟು ನೀನು, ಇಷ್ಟು ಉಪಕಾರಮಾಡು" ಎಂದು ದೈನ್ಯದಿಂದ ಬೇಡಿದನು. ಅಷ್ಟೇ ಹೊರತು ಪರಾಕ್ರಮಾತಿಶಯವನ್ನು ತೋರಿಸುತ್ತಾ ಹೇಳಲಿಲ್ಲ.

## ಪದ್ಯ ೩೬.

ಪಾರ್ಶ್ವೇ ಲೋಲೈಃ ಪರಭೃತಕುಲೈರ್ಮುಕ್ತಕೋಲಾಹಲಾನಾಂ
ಮಲ್ಲೀರೇಣುಸ್ಥಗಿತವಪುಷಾಂ ಮಂದರಂ ನಿರ್ಗತಾನಾಂ ।
ಭೀತೇನಾಹಂ ಭ್ರಮರಪಟಲೀಶೃಂಖಲಾಸಂಕುಲಾನಾಂ
ಮಾರ್ಗೇ ತಿಷ್ಠನ್ಮಲಯಮರುತಾಂ ವಾರಿತೋ ಲಕ್ಷ್ಮಣೇನ ॥

ಮಲಯಪರ್ವತದಿಂದ ಗಾಳಿಯು ಬೀಸುತ್ತಿದೆ. ಇದು ಕೆಳಗಿನ ರೀತಿಯಲ್ಲಿ ವರ್ಣಿತವಾಗಿದೆ:—

ಆ ಸ್ಥಳದಲ್ಲಿ ಕೋಗಿಲೆಗಳು ಅವ್ಯಕ್ತಮಧುರವಾಗಿ ಧ್ವನಿ ಮಾಡುತ್ತಲಿವೆ. ತುಂಬಿಗಳು ಮಲ್ಲಿಗೆಯ ಹೂಗಳಲ್ಲಿ ಸಂಚರಿಸಿಕೊಂಡು ಬರುತ್ತಿರುವುದರಿಂದ, ಅವುಗಳ ಮೈಗೆ ಪರಾಗಗಳು ಅಂಟಿಕೊಂಡು ಬೂದಾಗಿ, ಸಾಲುಸಾಲಾಗಿ ನಡೆಯುತ್ತಲಿರುವುದರಿಂದ (ಚಲಿಸು), ಧೂಳಿನಿಂದ * ಮಲಿನವಾದ ಸರಪಣಿಯಂತೆ ಕಾಣುತ್ತದೆ.

ಆದುದರಿಂದ ಮೆಲ್ಲಗೆ ಬೀಸುವ ಗಾಳಿಯ ಪ್ರದೇಶವಲ್ಲಿ, ನಾನು ಮುಂದೇನು ಮಾಡಬೇಕೆಂದು ತೋರದೆ ನಿಂತುಬಿಟ್ಟೆನು.

ವಿರಹದುಃಖಿತನಾದ ನಾನು, ಹೆದರಿದ ಅಥವಾ ಭ್ರಾಂತನಾದ ನನ್ನ ತಮ್ಮ ಲಕ್ಷ್ಮಣನಿಂದ, ಆ ಕೇಡಿನಿಂದ ಪಾರಾದೆನು.

ಆನೆಗಳನ್ನು ಕಾಡಿನಿಂದ ಹೊಸದಾಗಿ ಹಿಡಿದು ತಂದಿರುವರು. ಮಾವುತರು ಅವುಗಳ ಪಕ್ಕಗಳಲ್ಲಿ ಹೋಗುತ್ತಾ ಅವುಗಳನ್ನು ‡ ಪಳಗಿಸುವುದಕ್ಕೋಸ್ಕರ ಸ್ತುತಿ ಕೋಲಾಹಲ ನಂಬಿಕೆಯ ಮಾತುಗಳನ್ನು ಅವುಗಳಿಗೆ ಹೇಳುತ್ತಿರುವರು. ಅಥವಾ ಅವುಗಳೇ ಘೀಂಕರಿಸುತ್ತಿರಬಹುದು. ಅವು ತಮ್ಮ ಮೈಮೇಲೆಲ್ಲಾ ಮಣ್ಣೆರಚಿಕೊಂಡು ಕೊಳೆಮಾಡಿಕೊಂಡಿವೆ. ಸರಪಣಿಗಳನ್ನು ಕಾಲಿಗೆ ತೊಡಿಸಿದ್ದಾರೆ. ಅವು ಮನಸ್ಸಿಗೆಬಂದಂತೆ ತಮ್ಮ ಯಜಮಾನನಿಗೆ ತೊಂದರೆ ಗೊಳಿಸುತ್ತಿವೆ. ಮೇಲೆಹೇಳಿದ ಆನೆಗಳು, ಮದೋದಕಕ್ಕೋಸ್ಕರ ಬಂದ ತುಂಬಿಗಳಿಂದ ಆವೃತವಾಗಿವೆ. ಹೆಚ್ಚಾಗಿ ಕೊಬ್ಬಿರುವುದರಿಂದ ಮೆಲ್ಲಗೆ ಹೆಜ್ಜೆಯಿಡುತ್ತಿವೆ. ಹೊಸದಾಗಿ ಹಿಡಿದುತಂದಿರುವ ಬಹಳ ಬಲಿಷ್ಠವಾದ ಆನೆಗಳ ವೃತ್ತಾಂತವು ವಾಯುವಿಗೆ ಕೊಟ್ಟಿರುವ ವಿಶೇಷಣಗಳಿಂದ ತೋರಿಬರುವುದು.

ಟಿಪ್ಪಣಿ:—ಇದು ವಸಂತಕಾಲದ ಸಹಜವಾದ ಮನೋಹರ ವರ್ಣನೆಯಾಗಿದೆ. (ಶೈತ್ಯಸೌರಭ್ಯಮಾಂದ್ಯಗುಣಯುಕ್ತವಾದ ಗಾಳಿಯು ಬೀಸುತ್ತಿದೆ.)

* ಕೊಳೆಯಾದ.

‡ ಹತೋಟಿಗೆ ತಂದುಕೊಳ್ಳುವುದಕ್ಕೋಸ್ಕರ. ತುಂಬಿಗಳು=ದುಂಬಿಗಳು.

ಇಲ್ಲಿ ಆನೆಗಳನ್ನು ಹಳ್ಳಕ್ಕೆ ತಳ್ಳಿ ಹಿಡಿದಮೇಲೆ, ಅವುಗಳನ್ನು ಪಳಗಿಸುವ ಕ್ರಮವು ಮನೋಹರವಾಗಿ ವಿವೃತವಾಗಿದೆ. ಮೈಸೂರು ದೇಶದ ಕಾಕನಕೋಟೆ ಕಾಡಾಪುರಗಳಲ್ಲಿ ಈ ಕ್ರಮವು (ಖೆಡ್ಡಾ) ಈಗಲೂ ನಡೆಯುತ್ತಿದೆ. ನಮ್ಮ ಮೈಸೂರು ನಗರದಲ್ಲೂ ಹೊಸ ಆನೆಗಳನ್ನು ಪಳಗಿಸುವ ಕ್ರಮವನ್ನು ನಾವು ನಿತ್ಯವೂ ನೋಡುತ್ತಿದ್ದೇವೆ.

**ಪದ್ಯ ೩೭.**

ಮಂದೋ ವಕ್ಷ್ಯೇ ಕಿಮಿವ ಜನಕಂ ಕಿಂ ನು ಯೋಗೀಶ್ವರೋಮಾಂ
ಇತ್ಯೇವಂ ಮೇ ಸುತನು ಮನಸೋ ವರ್ತಯಂತಿಸ್ಮ ಖೇದಂ |
ರಕ್ತಾಶೋಕೇ ಜ್ವಲತಿ ಸವಿಧೇ ಲಾಜವರ್ಷಾಭಿರಾಮೈಃ
ಪುಕ್ತಾಷ್ಪೈಸ್ತ್ವತ್ಪರಿಣಯದಶಾಂ ವ್ಯಂಜಯಂತಃ ಕರಂಜಾಃ ||

ಎತ್ತರವಾಗಿ ಬೆಳೆದಿರುವ ಚಿರಬಿಲ್ವವೃಕ್ಷಗಳ ಬಿಳುಪಾದ ಹೂಗಳು, ಪಕ್ಕದಲ್ಲಿ ಕೆಳಗಡೆ, ಅಶೋಕದ ಕೆಂಪು ಹೂಗೊಂಚಲುಗಳಲ್ಲಿ ಬೀಳುತ್ತಿರುವುದು ಅಂದವಾಗಿ ವರ್ಣಿತವಾಗಿದೆ:—

ಎಲೈ ಮನೋಹರಾಂಗಿಯೇ, ಕೆಂಪಾದ ಅಶೋಕದ ಪುಷ್ಪಗಳು, ಸಮೀಪದಲ್ಲಿ ಪ್ರಕಾಶಿಸುತ್ತಿವೆ. ಅರಳುಗಳ ಮಳೆಯಂತೆ ರಮಣೀಯವಾದ, ಅಶೋಕದ ಹೂಗೊಂಚಲುಗಳಲ್ಲಿ ಬೀಳುತ್ತಿರುವ ಚಿರಬಿಲ್ವಹೂಗಳ ಗುಂಪುಗಳು ಲಾಜಹೋಮದೊಡನೆ ಸಂಬಂಧಿಸಿರುವ ನಿನ್ನ ಮದುವೆಯನ್ನು ನೆನಪಿಗೆ ತರುತ್ತಿವೆ. ಭಾಗ್ಯಹೀನನಾದ * ನಾನು, ನಿನ್ನ ತಂದೆಯನ್ನು ಕುರಿತು ಆತನಿಗೆ ಏನೆಂದು ಉತ್ತರಹೇಳಲಿ?

ಜನಕರಾಜನು, ನಿನ್ನನ್ನು ಹೀಗೆ ಕಳೆದುಕೊಂಡುಬಂದ, ನನ್ನನ್ನು ಕುರಿತು ಏನುತಾನೇ ಹೇಳುವನು.

ಮೇಲೆಹೇಳಿದಂತೆ ನನ್ನ ಮನಸ್ಸಿಗೆ ಚಿರಬಿಲ್ವವೃಕ್ಷಗಳು ದುಃಖವನ್ನುಂಟುಮಾಡುತ್ತಿದ್ದುವು.

ಟಿಪ್ಪಣಿ:—* ಸೀತೆಯು ಕ್ಷೇಮಿಯಾಗಿದ್ದಾಳೆಯೇ ಎಂದು ಜನಕನಿಂದ ಪ್ರಶ್ನಿತನಾಗುವ.

ಈಗಲೂ ಕನ್ಯಾದಾನವಾದಮೇಲೆ ವಿವಾಹಪರಿಪೂರ್ಣವಾಗಲು ಲಾಜಹೋಮ ಮೊದಲಾದುವು ನಡೆಯುತ್ತಿವೆ. ಅಗ್ನಿದೇವನಿಗೆ (ಯಜ್ಞೇಶ್ವರನಿಗೆ) ಲಾಜವನ್ನು ಅರ್ಪಿಸುವುದು, ಶಾಸ್ತ್ರಸಮ್ಮತವಾದುದು. ಉರಿಯುತ್ತಿರುವಾಗ ಭತ್ತದ ಅರಳನ್ನು ಅಗ್ನಿಭಗವಾ

ನನಿಗೆ ಅರ್ಪಿಸುವ ಪ್ರಕರಣವನ್ನು ಈ ಪದ್ಯದಲ್ಲಿ ಸೊಗಸಾಗಿ ವರ್ಣಿಸಿದೆ. ಜ್ವಾಲೆಯು ಕೆಂಬಣ್ಣಕ್ಕೂ, ಅರಳುಗಳು ಬೆಳ್ಳಗೂ ಇದೆ. ಇದನ್ನು ಸ್ಮರಿಸಿಕೊಂಡರೆ ಪದ್ಯಾರ್ಥವು ಸ್ಫುಟವಾಗುವುದು.

**ಪದ್ಯ ೩೮.**

ಚೇತೋ ನೈವ ತ್ಯಜತಿ ಚಪಲಾಹೇಮಕೋಣಾಭಿಘಾತಾತ್
ಧೀರೋದಾತ್ತಸ್ತನಿತಜಲದಾತ್ ತಾಂಡವಾರಂಭಮಿಚ್ಛನ್ ।
ವಾತೋನ್ಮುಕ್ತೈಃ ಕುಟಜಕುಸುಮೈರ್ವಾಸಿತೇ ಶೈಲಶೃಂಗೇ
ರಕ್ಷಃಪೀಡಾರಹಿತದಯಿತಾಶ್ಲೇಷಧನ್ಯೋ ಮಯೂರಃ ॥

ಮಾಲ್ಯವಂತಪರ್ವತದ ಶಿಖರವು, ವಾಯು ಎರಚಿದ ಬೆಟ್ಟ ಮಲ್ಲಿಗೆಯ ಹೂಗಳಿಂದ * ಪರಿಮಳಿತವಾಗಿದೆ:—

ಎಲ್ಲೂ ತಡೆಯಲ್ಪಡದ, ಮನೋಹರವಾಗಿ ಗುಡುಗುತ್ತಿರುವ ಮೋಡಗಳಮೇಲೆ ಮಿಂಚುಗಳೆಂಬ ಚಿನ್ನದ ಬಾಜಿಸುವ ಕೋಲುಗಳ ಏಟಿನಿಂದಾಗುವ ಸದ್ದನ್ನು ಅನುಸರಿಸಿ, ಅಲ್ಲಿ ಕುಣಿಯಲು ಇಷ್ಟ ಪಡುವ, ರಾವಣನಿಂದ ಅಪಹಾರಾದಿ ತೊಂದರೆಗಳಿಲ್ಲದಿರುವ, ಪ್ರಿಯ ಮಯೂರಿಯ ಆಶ್ಲೇಷದಿಂದ ‡ ಪುಣ್ಯಶಾಲಿಯಾದ, ಗಂಡುನವಿಲು, ನನ್ನ ಮನಸ್ಸನ್ನು ಬೇರೆ ಸಂದರ್ಭಗಳಿದ್ದರೂ † ನೋಡುವುದಕ್ಕೆ ಬಿಡುವುದೇ ಇಲ್ಲ.

ಟಿಪ್ಪಣಿ:—* ಸುವಾಸನೆಯುಳ್ಳದ್ದಾಗಿದೆ.

‡ ಪುಣ್ಯಮಾಡಿರುವ.

† ಯಾವಾಗಲೂ ನೆನೆಪಿಗೆ ಬರುವಂತೆ ಮಾಡುತ್ತಲೇ ಇದೆ. ಸಂದರ್ಭ= ಸನ್ನಿವೇಶ.

ನರ್ತನಮಾಡುವಾಗ ರಂಗಸ್ಥಳದಲ್ಲಿ ಪುಷ್ಪಗಳನ್ನು ಎರಚುವುದು ಸ್ವಭಾವ. ತಬಲವನ್ನೋ, ಮೃದಂಗವನ್ನೋ ನೃತ್ಯಕ್ಕೆ ಅನುಸರಿಸಿ ಹೊಡೆಯುವುದು ಅನುಭವ ಸಿದ್ಧವಾದ ವಿಷಯ. ಭರತಶಾಸ್ತ್ರದಲ್ಲಿ ಪರಿಶ್ರಮವುಳ್ಳ ಸ್ತ್ರೀಯೋ, ಪುರುಷನೋ ಹಾಡುತ್ತಾ ಕುಣಿಯುತ್ತಿರುವನು. ಇದು ನೋಡುವುದಕ್ಕೂ, ಕೇಳುವುದಕ್ಕೂ ಸೊಗಸಾಗಿರುವುದು.

ಇಲ್ಲಿ ಮಾಲ್ಯವಂತ ಪರ್ವತಶಿಖರವೇ ಅರ್ಹವಾದ ರಂಗಸ್ಥಳವು. ಮೋಡಗಳೇ ತಬಲಾ ಅಥವಾ ಮೃದಂಗವಾಗಬಹುದು. (ಛಕ್ಕಾ) ಮಿಂಚುಗಳೇ ಹೊಡೆಯುವ ಕೋಲು. ರೆಕ್ಕೆಗಳನ್ನು ಪಸರಿಸಿಕೊಂಡು ಸಂತೋಷದಿಂದ ಗುಡುಗನ್ನು ಅನುಸರಿಸಿ "ಕೇಕಾ" ಎಂದು ಕೂಗುತ್ತಾ ಕುಣಿಯುತ್ತಿರುವ ನವಿಲೇ ನರ್ತಕನು.

ವರ್ಷಾಕಾಲದಲ್ಲಿ, ನವಿಲು ಸಂತೋಷದಿಂದ ಕುಣಿಯುವುದು ಸ್ವಭಾವ.

## ಪದ್ಯ ೩೯.

ಶೈಲವ್ಯಕ್ತಪ್ರತಿವಿಲಪಿತಾಂ ಸಾಂದ್ರತಾಪಾನುವಿದ್ಧಾಂ
ತನ್ವಾನಾನಾಂ ನಯನಸಲಿಲೈರ್ಮಾತರಂ ತೇ ಸಬಾಷ್ಪಾಂ |
ಪಶ್ಯಂತೀನಾಂ ಪ್ರಬಲಮದನೋನ್ಮಾದಪರ್ಯಾಕುಲಂ ಮಾಂ
ಪ್ರಾಯೋ ಜಾತಂ ಕಿಮಪಿ ರುದಿತಂ ವ್ಯೋಮ್ನಿ ಕಾದಂಬಿನೀನಾಂ ||

ನಾನು * ಪ್ರಬಲವಾದ ಮದನೋನ್ಮಾದದಿಂದ ದುಃಖಪಡುತ್ತಿರುವುದನ್ನು ಮೋಡಗಳೆಂಬ ಸ್ತ್ರೀಯರು ಮಿಂಚೆಂಬ ಕಣ್ಣುಗಳಿಂದ ನೋಡಿ ಕಣ್ಣೀರೆಂಬ ಹೊಸದಾದ ನೀರಿನ ಹನಿಗಳಿಂದ ಕೂಡಿಕೊಂಡರು.

ಬಹಳಕಾಲದಿಂದಿರುವ ನನ್ನ ಹೀನಸ್ಥಿತಿಯನ್ನು (ನಿನ್ನ ತಾಯಿ ಭೂದೇವಿಯು) ನೋಡುವುದರಿಂದ ಉಂಟಾದ ‡ ಬೇಗೆಯಿಂದ ಹೊಡೆಯಲ್ಪಟ್ಟವಳನ್ನಾಗಿಯೂ,

ನಿನ್ನ ತಾಯಿ ಭೂದೇವಿಯನ್ನು ಕಣ್ಣೀರಿನಿಂದ ಕೂಡಿದವಳನ್ನಾಗಿಯೂ,

ಪರ್ವತಗಳಲ್ಲಿ † ಸ್ಪಷ್ಟವಾಗಿ ಅಳುವೆಂದು ಆರೋಪಿತವಾದ,

ಬೇಸಗೆಯ ಸಂಬಂಧದಿಂದ ಉಂಟಾದ ಬೇಗೆಯಿಂದ ಹೊಡೆಯಲ್ಪಟ್ಟ (ವಳನ್ನಾಗಿಯೂ) ವಿಷದಿಂದ ಅದ್ದಿದ ಬಾಣದಿಂದ ತಾಡಿತಳನ್ನಾಗಿಯೂ,

ಹೆಚ್ಚಾಗಿ ಕಾದ ನೆಲದಮೇಲೆ ಆಕಾಶದಿಂದ ಮೊಟ್ಟಮೊದಲ ಮೋಡದ ಹನಿಗಳು ಬೀಳಲು, ನೆಲದಿಂದ ಕಾವೂ, ಹಬೆಯೂ ಏಳುವುದು. ಇದರಿಂದಲೇ ನಿನ್ನ ತಾಯಿಯನ್ನು ಕಣ್ಣೀರಿನಿಂದ ಕೂಡಿದವಳನ್ನಾಗಿ ಮಾಡುತ್ತಿರುವರು.

ಮಾರ್ದನಿಯಿಂದ ಅಳುವೆಂದು ಆರೋಪಿತವಾದ ತಮ್ಮ ÷ ಗುಡುಗೆಂಬ ಪ್ರತಿಧ್ವನಿಯುಳ್ಳವಳನ್ನಾಗಿಯೂ ಮಾಡುತ್ತಿರುವ, ಮೋಡದಸಾಲುಗಳಿಗೆ ಆಧಾರಸ್ಥಳವಾದ ಆಕಾಶದಲ್ಲಿ ಹೀಗೆಂದು ನಿಷ್ಕರ್ಷಿಸಿ ವರ್ಣಿಸುವುದಕ್ಕೆ ಆಗದ ರೋದನವು (ಅಳುವು) ಉಂಟಾಯಿತು. ಇದು ಹೀಗಿರಬಹುದು.

ಮೋಡವೆಂಬ ಹೆಂಗಸರು ಅತ್ತರು. ಆಮೇಲೆ ತಮ್ಮ ಬಂಧುವಾದ ಭೂದೇವಿಯನ್ನು, ತಮ್ಮ ದುಃಖವನ್ನು ಅವಳಿಗೆ ವಿವರಿಸಿ ಹೇಳುವುದಕ್ಕೆ ಸಾಮರ್ಥ್ಯ ಸಾಲದೇಹೋದುದರಿಂದ, ಆಕೆಯನ್ನು (ಭೂದೇವಿಯನ್ನು) ಅಳುವಂತೆಮಾಡುತ್ತಿರುವರು. ಇದರಲ್ಲಿ ಯಾರೋ ಕೆಲವರು ದಯಾಶಾಲಿಗಳಾದ ಸ್ತ್ರೀ ಸಂಸಾರಿಗಳ ವೃತ್ತಾಂತವು ಮೋಡಗುಡುಗುಗಳ ವರ್ಣನೆಯಿಂದ ತೋರುತ್ತಿರುವುದು.

ಟಿಪ್ಪಣಿ:--ವರ್ಷಾಕಾಲದಲ್ಲಿ ಮೋಡ ಮಿಂಚು ನೀರುಹನಿ ಗುಡುಗುಗಳು ಇರುವುದು ಸಹಜ. ಮೋಡಗಳೆಂಬ ಸ್ತ್ರೀಯರು, ಮಿಂಚುಗಳೆಂಬ ತಮ್ಮ ಕಣ್ಣುಗಳಿಂದ ಅಶ್ರುವೆಂಬ ಹೊಸನೀರಿನ ಹನಿಗಳನ್ನು, ದುಃಖಿತನಾದ ನನ್ನನ್ನು ನೋಡಿ ಸುರಿಸಿದರು. ಆಮೇಲೆ ಅವರು, ನಿನ್ನ (ಸೀತೆಯ) ತಾಯಿ ಭೂದೇವಿಯನ್ನು ಕಣ್ಣೀರುಸುರಿಸುವಂತೆ ಮಾಡಿದರು. ಆ ಕಾದಂಬಿನೀ ಸ್ತ್ರೀಯರು ತಾವು ಗುಡುಗಿನ ರೂಪದಲ್ಲಿ ‡ ಹೆಚ್ಚಾಗಿ ಅತ್ತು, ನಿನ್ನ ತಾಯಿಯನ್ನೂ ಪರ್ವತಗಳಲ್ಲಿ × ತಮ್ಮಿಂದ ಆದ ⁄ ಮಾರ್ದನಿಗಳಿಂದ ಹೆಚ್ಚಾಗಿ ಅಳುವಂತೆ ಮಾಡಿದರು.

* ಹೆಚ್ಚಾದ ವಿರಹದುಃಖದಿಂದ.

‡ ಸಂತಾಪದಿಂದ.

† ಸಹಜವಾಗಿ.
÷ ಮೋಡಗಳ.
$ ಗೊಳೋ ಎಂದು ಅತ್ತು.
× ಗುಡುಗುಗಳಿಂದ.
£ ಪ್ರತಿಧ್ವನಿ. ಅಶ್ರು=ಕಣ್ಣೀರು.

## ಪದ್ಯ ೪೦.

ದೇಹಸ್ಪರ್ಶಂ ಮಲಯಪವನೇ ದೃಷ್ಟಿಸಂಭೇದಮಿಂದೌ
ಧಾಮ್ನೈಕತ್ವಂ ಜಗತಿ ಭುವಿ ಚಾಭಿನ್ನಪರ್ಯಂಕಯೋಗಂ |
ತಾರಾಚಿತ್ರೇ ವಿಯತಿ ವಿತತಿಂ ಶ್ರೀವಿತಾನಸ್ಯ ಪಶ್ಯನ್
ದೂರೀಭೂತಾಂ ಸುತನು ವಿಧಿನಾ ತ್ವಾಮಹಂ ನಿರ್ವಿಶಾಮಿ ||

ಎಲೈ ಮನೋಹರಾಂಗಿಯೇ, ನಿನ್ನ ಅಂಗಗಳಮೇಲೆ ಬೀಸಿಕೊಂಡುಬರುವ, ಮಲಯಮಾರುತವು, ನನ್ನ ಮೈಮೇಲೆ ಬೀಸುವುದನ್ನು, ನಿನ್ನ ದೇಹದ ಸ್ಪರ್ಶವನ್ನಾಗಿಯೂ, ನೀನು ನೋಡಿದ ಚಂದ್ರನನ್ನು ದರ್ಶನಮಾಡುವುದರಿಂದಲೇ ನಿನ್ನನ್ನು ನೋಡಿದವನನ್ನಾಗಿಯೂ, ಒಂದೇ ಲೋಕದಲ್ಲಿ ಇಬ್ಬರೂ ವಾಸಿಸುತ್ತಿರುವುದರಿಂದ ಒಂದೇ ಮನೆಯಲ್ಲಿ ವಾಸಮಾಡುತ್ತಿರುವುದನ್ನಾಗಿಯೂ, ಒಂದೇ ಭೂಮಿಯಲ್ಲಿ ವಾಸಿಸುತ್ತಿರುವುದನ್ನೇ ಒಂದೇ * ಶಯನದಲ್ಲಿರುವುದನ್ನಾಗಿಯೂ, ನಾನಾವರ್ಣಗಳಿಂದ ಶ್ರೇಷ್ಠವಾದ ನಕ್ಷತ್ರಗಳ ಗುಂಪಿನಿಂದ, ವಿಚಿತ್ರವರ್ಣವಾಗಿರುವ ಆಕಾಶವನ್ನೇ, ಭೂಮಿಯೆಂಬಶಯನದ (ಹಾಸುಗೆ) ಮೇಲೆಕಟ್ಟಿದ ಮೇಲುಕಟ್ಟನ್ನಾಗಿಯೂ ತಿಳಿಯುತ್ತೇನೆ.

ಆದುದರಿಂದ, ನೀನು ದೂರದಲ್ಲಿದ್ದರೂ, ನಾನು ಹಿಂದೆ ಹತ್ತಿರದಲ್ಲಿದ್ದವಳನ್ನೇ, ದೇವರಾಜ್ಞೆಯಿಂದ ಈಗ ದೂರದಲ್ಲಿದ್ದರೂ, ಸಮೀಪದಲ್ಲಿದ್ದಂತೆ ಭಾವಿಸಿ ನಿನ್ನೊಡನೆ ಸುಖಿಸುತ್ತೇನೆ.

ನಿನ್ನನ್ನು, ಮೇಲಿನಂತೆ ಸಾಮಗ್ರಿಗಳನ್ನು ಏರ್ಪಡಿಸಿಕೊಂಡು ದೂರದಲ್ಲಿದ್ದರೂ, ಸಮೀಪದಲ್ಲೇ ಇರುವವಳನ್ನಾಗಿ † ತಿಳಿಯುತ್ತಾ ಸುಖಿಸುವೆನು. ಹೀಗೆ ಕಲ್ಪಿತವಾದ ಸುಖಭಾವನೆಯಿಂದಲೇ ಕಾಲವನ್ನು ವಿನೋದವಾಗಿ ಕಳೆಯುತ್ತೇನೆ.

ಟಿಪ್ಪಣಿ:—* (ಕಾಮಿಯಾದವನಿಗೆ, ಕಾಮಿನಿಯೊಡನೆ ಸಮಾನಶಯನದಲ್ಲಿ ಇರುವಂತೆ ತಿಳಿವಳಿಕೆಯನ್ನುಂಟುಮಾಡುವ ಭೂಮಿಯ ಆಶ್ರಯವೇ ಸ್ವಲ್ಪ ಮಟ್ಟಿಗೆ ಮನಸ್ಸಮಾಧಾನಪಡಿಸತಕ್ಕದ್ದು ಆಗುವುದು.)

‡ ಇರುವಂತೆ.

† ಅನುಭವಿಸುತ್ತಾ.

ಸೀತೆಯು ದೂರದಲ್ಲಿದ್ದರೂ, ರಾಮನು, ಆಕೆಯನ್ನು ಮನಸ್ಸಿನಿಂದ ಹತ್ತಿರದಲ್ಲಿರುವವಳನ್ನಾಗಿ ತಿಳಿದು ಸುಖಿಯಂತೆ ಭಾವಿಸಿಕೊಳ್ಳುವನು.

ಸ್ಪರ್ಶ=ಮುಟ್ಟುವಿಕೆ. ನಕ್ಷತ್ರಗಳಿಂದ ವಿಚಿತ್ರವಾದ ಆಕಾಶವನ್ನು ಮೇಲುಕಟ್ಟೆಂದು ಹೇಳಿರುವುದು ರಮ್ಯವಾಗಿದೆ.

## ಪದ್ಯ ೪೧.

ಪ್ರಾಪ್ತೈಸ್ಸಖ್ಯಂ ತವನಯನಯೋಃ ಪದ್ಮಕೋಶೈಃಪ್ರಬುದ್ಧೈಃ
ಸನ್ನಾಹಂ ನಸ್ಸಮಯನಿಯತಂ ಸಾಧುಸಂಧುಕ್ಷಯಂತೀ |
ಸೇನಾಯೋಗ್ಯಾಂ ಸರಣಿಮಧುನಾದರ್ಶಯಂತೀಶುಭಾಶಾ
ಸೀತೇನೂನಂ ತ್ವರಯತಿಶರತ್ತ್ವತ್ಸಮೀಪಂ ನಿನೀಷುಃ ||

ಸೀತೆಯೇ, ಈಗ ಶರದೃತುವೊದಗಿ ಎಲ್ಲೆಲ್ಲೂ ನಿನ್ನ ಕಣ್ಣುಗಳಂತಿರುವ ಅರಳುತ್ತಿರುವ ತಾವರೆಮೊಗ್ಗುಗಳು ಕಾಣುತ್ತಿವೆ. ಶರತ್ಕಾಲವು ಅವುಗಳಿಂದ ನಮಗೆ, ರಾಜನೀತಿಯು ಹೇಳುವ (ಆಜ್ಞಾಪಿಸುವ) ಶತ್ರುನಿಗ್ರಹಕ್ಕೋಸ್ಕರ ಪ್ರೋತ್ಸಾಹಗೊಳಿಸುತ್ತಿದೆ. ಸೇನಾಸಂಚಾರಕ್ಕೆ ತಕ್ಕ ದಾರಿಯನ್ನು ಈಗ ತೋರಿಸಿಕೊಡುತ್ತದೆ. ಎಲ್ಲೆಲ್ಲೂ ದಿಕ್ಕುಗಳನ್ನು ಹೊಳೆಯುತ್ತಿರುವಂತೆ ಮಾಡಿದೆ.

ಅಗಲಿರುವ ನಮ್ಮಿಬ್ಬರನ್ನೂ ಸೇರಿಸುವುದರಲ್ಲಿ ಹೆಚ್ಚು ಸಹಾಯಕವಾಗಿದೆ. ಈ ಕಾಲವು ನಮ್ಮನ್ನು ನಿನ್ನ ಹತ್ತಿರಬರುವಂತೆ ಮಾಡುವುದಕ್ಕೆ ಅಪೇಕ್ಷಿಸುತ್ತಾ, ನಾವು ಹೆಚ್ಚು ಆತುರಗೊಳ್ಳುವಂತೆ ಮಾಡುತ್ತಿದೆ. ಇದು ನ್ಯಾಯವೇ ಆಗಿದೆ.

ಪ್ರಸ್ತುತವಾದ ಶರದೃತುವಿನ ವರ್ಣನೆಯಿಂದ, ಪ್ರಿಯೆಯ ವಿರಹದಿಂದ ದೀನನಾಗಿರುವ ರಘುರಾಮನಿಗೆ, ನೀತಿಯನ್ನು ಹೇಳಿ ಪ್ರೋತ್ಸಾಹಗೊಳಿಸಿ ಲಂಕೆಗೆ ದಂಡೆತ್ತಿ ಹೊರಡಲು ಅನುಕೂಲವಾದ ದಾರಿಯನ್ನೂ ತೋರಿಸುವುದರಿಂದ, ಸೀತೆಯಿರುವ ಜಾಗಕ್ಕೆ ಹೋಗಲು ಆತುರಪಡಿಸುತ್ತಿರುವ (ತ್ವರೆಮಾಡುತ್ತಿರುವ) ದಯಾಶಾಲಿ ಸಖಿಯ ವೃತ್ತಾಂತವು ತೋರಿಬರುತ್ತದೆ.

ಟಿಪ್ಪಣಿ:—ಅಗಲಿದ ದಂಪತಿಗಳನ್ನು ಸೇರಿಸುವ ಒಳ್ಳೆಯ ಕೆಲಸದಲ್ಲಿ ಆಶೆಯುಳ್ಳದ್ದು. ಶರತ್ಕಾಲವು ದಂಡಯಾತ್ರೆಗೆ ಅನುಕೂಲವಾದ ಸಮಯ.

**ಪದ್ಯ ೪೨.**

ತಾತಾದೇಶಾತ್ ಸಪದಿಭರತೇನ್ಯಸ್ತರಾಜ್ಯಾಭಿಷೇಕಂ
ಯಾಮಾಮೇಕಾಪನಮನುಗತಾ ರಾಜಧಾನೀಂ ವಿಹಾಯ |
ತಾಮೇವ ತ್ವಾಮುಚಿತಶಯನಾಂ ಬಾಹುಮಧ್ಯೇಮದೀಯೇ
ದೂರೀಕೃತ್ವಾ ಗುಣವತಿಮುಹುರ್ದೂಯತೇ ಜೀವಿತಂಮೇ ||

ತಂದೆಯ ಅಪ್ಪಣೆಯಿಂದ, ತತ್‌ಕ್ಷಣವೇ ಕೈಕೆಯ ಮಗ ಭರತನಿಗೆ, ರಾಜ್ಯವನ್ನು ವಹಿಸಿದ ಆ ನನ್ನೊಡನೆ, ನೀನೊಬ್ಬಳೇ ಸಂಪತ್ ಸಮೃದ್ಧವಾದ ರಾಜಧಾನಿಯನ್ನು ಬಿಟ್ಟುಬಿಟ್ಟು ಕಷ್ಟಕರವಾದ ದಂಡಕಾರಣ್ಯಕ್ಕೆ ಬಂದೆ.

ನನ್ನ ವಕ್ಷಃಸ್ಥಲದಮೇಲೆ ಹಾಸಿಗೆಯಲ್ಲೋಪಾದಿಯಲ್ಲಿ ಮಲಗುತ್ತಿದ್ದ ಸುಕುಮಾರಿಯಾದ ಆ ನಿನ್ನನ್ನೇ, ದೂರಮಾಡಿರುವ ನನ್ನ ಜೀವನವು (ಪ್ರಾಣವು) ಆಗಾಗ್ಯೆ ಬಹಳ ದುಃಖಪಡುತ್ತದೆ.

ಪಾತಿವ್ರತ್ಯ ಸೌಂದರ್ಯ ಮುಂತಾದ ಗುಣವುಳ್ಳವಳೇ, ಇಂಥ ನಿನ್ನನ್ನು ಅಗಲಿ ನಾನು ದುಃಖಪಡದಿರಲು ಹೇಗೆತಾನೇ ಸಾಧ್ಯ?

ಟಿಪ್ಪಣಿ:—ಸೀತೆಯು, ರಾಮನನ್ನೇ ಎಲ್ಲಕ್ಕಿಂತ ಮೇಲಾದ ಸಂಪತ್ತೆಂದು ಭಾವಿಸಿದ್ದಳು, ರಾಮನೂ ಸೀತೆಯನ್ನು ಅಂತೆಯೇ ತಿಳಿದಿದ್ದನು. ಉತ್ತಮರಾದ ದಂಪತಿಗಳೆಂದರೆ ಇವರೇ ಹೌದು.

**ಪದ್ಯ ೪೩.**

ಸೇತುಂಬಧ್ವಾ ವಿಪುಲಮಚಲೈಸ್ಸಾಯಕೈರ್ವಾಪಯೋಧೌ
ಕೃತ್ವಾಲಂಕಾಂ ಸ್ರಜಮಿವಕರೇಷ್ಮಲತಾಂ ವಾನರಾಣಾಂ|
ಅಲ್ಪೀಯೋಭಿಸ್ಸುಮುಖಿ ದಿವಸೈರ್ಯೋಧಯನ್ ಯಾತುಧಾನಾನ್
ಕರ್ಣೇಸೀಧುಂ ತವರಚಯಿತಾಲಕ್ಷ್ಮಣಶ್ಚಾಪಘೋಷೈಃ ||

ಕಮಲಮುಖಿಯೇ, ದಾಟಲಸಾಧ್ಯವಾದ ಸಮುದ್ರಕ್ಕೆ ಬೆಟ್ಟಗಳಿಂದಾಗಲೀ ಅಥವಾ ಬತ್ತಳಿಕೆಯಲ್ಲಿರುವ ಅಕ್ಷಯ ಬಾಣಗಳಿಂದಾಗಲೀ, ನನ್ನ ಸೈನ್ಯಸಂಚಾರಕ್ಕೆ ತಕ್ಕಷ್ಟು ಅಗಲವಾದ ಸೇತುವನ್ನು ಕಟ್ಟುವೆನು. ಮನಬಂದಂತೆ ಆಡುತ್ತಿರುವ ಕಪಿಗಳ ಕೈಯ್ಯಲ್ಲಿ ಸಿಕ್ಕಿರುವ ಹೂಮಾಲೆಯಂತೆ ಲಂಕಾನಗರವನ್ನು ಮಾಡುವೆನು.

ಬಹಳ ಸ್ವಲ್ಪದಿವಸಗಳಲ್ಲೇ ರಾಕ್ಷಸರನ್ನು ಪ್ರತಿಭಟಿಸಲು ಪ್ರೇರಿಸಿ, ಜಯಶಾಲಿಯಾದ ಲಕ್ಷ್ಮಣನು ಧನುಸ್ಸಿನ ಟಂಕಾರಗಳಿಂದ *ನಿನ್ನ ಕಿವಿಗಳಿಗೆ ಆನಂದಪಡಿಸುವನು. (ನಿನಗೆ ಆನಂದವನ್ನುಂಟು ಮಾಡುವನು.)

ಟಿಪ್ಪಣಿ:—ಕಪಿಯ ಕೈಗೆ ಕೊಟ್ಟ (ಸಿಕ್ಕಿದ) ಹೂಮಾಲೆಯನ್ನು ಅದು ಹೇಗೆ ನೂರಾರು ಪಾಲುಮಾಡಿ ಹೊಸಕಿ ಹಾಳುಮಾಡುತ್ತದೋ ಹಾಗೆ ಲಂಕೆಯನ್ನು ವಾನರ ವೀರರು ನಾಶಪಡಿಸುವರು.

* ನಮ್ಮ ಜಯದ ಸಮಾಚಾರವನ್ನು ಕೇಳಬೇಕೆಂಬ ಆಶೆಯುಳ್ಳ.

## ಪದ್ಯ ೪೪.

ರಕ್ಷೋಮೌಳಿಸ್ತಬಕಲವನಾತ್ ವೈರಬಂಧೇ ವಿಮುಕ್ತೇ
ಗತ್ವಾ ಚೋರ್ವೀಂ ಗಗನಪದವೀಂಸ್ವೈರಿಣಾ ಪುಷ್ಪಕೇಣ |
ಸಿದ್ಧಾರಂಭೌ ಸಪದಿ ಭವತಾಮಾಧಿರಾಜ್ಯಾಭಿಷೇಕಾತ್
ಸಂಪ್ರಾಪ್ಸ್ಯಾವಃ ಚಿರವಿರಹತಃ ಸಂಚಿತಾನ್ ದೇವಿ ಭೋಗಾನ್ ||

ಪಟ್ಟಿನುಹಿಷಿಯಾಗುವವಳೇ, ಹೂಗೊಂಚಲುಗಳಂತಿರುವ ರಾವಣನ ತಲೆಗಳನ್ನು ಕತ್ತರಿಸಿ ಹಾಕುವುದರಿಂದ *ದ್ವೇಷವೆಂಬ ಕಟ್ಟು ಬಿಚ್ಚಿ ಹೋಗುವುದು.

ಆಕಾಶಮಾರ್ಗದಲ್ಲಿ ಯಾವತಡೆಯೂ ಇಲ್ಲದೆ ಸಂಚರಿಸಬಲ್ಲ ಪುಷ್ಪಕವಿಮಾನದಿಂದ ಪ್ರಯಾಣಮಾಡಿ ಅಯೋಧ್ಯೆಯನ್ನು ಸೇರುವೆವು.

ತತ್ ಕ್ಷಣವೇ, ಪೂಜ್ಯರಾದ ವಶಿಷ್ಠ ಮುಂತಾದ ಮಹರ್ಷಿಗಳ ಮೇಲ್ವಿಚಾರಣೆಯಿಂದ ನಮಗೆ, ನೆರವೇರಿದ ಪಟ್ಟಾಭಿಷೇಕದಿಂದ ಸಾರ್ಥಕವಾದ ಚಕ್ರವರ್ತಿ ಪದವಿಯನ್ನು ಪಡೆಯುವೆವು.

ಅನಂತರ ಬಹಳಕಾಲದ ವಿರಹದಿಂದ ಮನಸ್ಸಿನಲ್ಲಿ ಆಲೋಚಿಸಿಕೊಂಡ ಸುಖಾನುಭವಗಳನ್ನು ಪಡೆಯುವೆವು. (ಪಡೆಯೋಣ.)

ಪ್ರಕೃತವಾದ ಶ್ರೀರಾಮ ವೃತ್ತಾಂತದಿಂದ "ಕರ್ಮದಿಂದ ಉಂಟಾದ ಶರೀರವೆಂಬ ಬಂಧನವು ಚೇತನನಿಗೆ ಬಿಟ್ಟುಹೋಗಲು, ವಿಮಾನದಿಂದ ಸರ್ವೋತ್ಕೃಷ್ಟ ‡ ಸ್ಥಳವನ್ನು ಸೇರಿ, ಅಲ್ಲಿ ಪರಬ್ರಹ್ಮನೊಡನೆ ಭೋಗಗಳನ್ನು ಅನುಭವಿಸುವುದಕ್ಕೆ ಆಸೆಪಡುವ ಮುಮುಕ್ಷುವಿನ ವೃತ್ತಾಂತವು" ಸೂಚಿತವಾಗುವುದು.

ಟಿಪ್ಪಣಿ:—* "ಮರಣಾಂತಾನಿವೈರಾಣಿ." ಯೋಚಿಸಿದ್ದಂತೆಯೇ ತಪ್ಪದೆ ರಾವಣನನ್ನು ಕೊಂದುಹಾಕುವೆನು.

‡ ಪದವಿಯನ್ನು, ಪದವನ್ನು. ಚೇತನನಿಗೆ=ಜೀವನಿಗೆ.

### ಪದ್ಯ ೪೫.

ಚಿತ್ತೇ ಕುರ್ಯಾತ್ತದಪಿ ಭವತೀ ಯಜ್ಜನಸ್ಥಾನಯುದ್ಧಾತ್
ಸಂಪ್ರಾಪ್ತಂ ಮಾಂ ದಶಮುಖಸಮಾನ್ ಪಾರಯಿತ್ವಾ ಖರಾದೀನ್ ।
ಶಸ್ತ್ರಘಾತಂ ಸ್ತನಕಲಶಯೋರೂಷ್ಮಣಾ ರೋಪಯದ್ಭಿಃ
ಗಾಢಾಶ್ಲೇಷೈರಪಿಹಿತವತೀ ಗದ್ಗದಾ ಹರ್ಷಬಾಷ್ಪೈಃ ॥

ರಾವಣನಿಗೆ ಸಮರಾದ ಖರದೂಷಣತ್ರಿಶಿರ ಮೊದಲಾದವರನ್ನು *ಜನಸ್ಥಾನದಲ್ಲಿ ಕೈಗೂಡಿದ ಯುದ್ಧದಲ್ಲಿ ಕೊಂದುಹಾಕಿ ಗೆದ್ದು ಹಿಂದಿರುಗಿಬಂದೆನು.

ಆಗ ನನ್ನನ್ನು ಆನಂದಬಾಷ್ಪಗಳಿಂದ ಗದ್ಗದೆಯಾದ ನೀನು ‡ಪಯೋಧರಗಳ ಸುಖಸ್ಪರ್ಶವಾದ ಬಾಷ್ಪದಿಂದ, ಖರಾದಿಗಳು ಪ್ರಯೋಗಿಸಿದ ಅಸ್ತ್ರಗಳಿಂದಾದ ಗಾಯವನ್ನು ತಿಳಿಯದ ಹಾಗೆಯೇ ಮಾಯುವಂತೆ ಮಾಡುತ್ತಿರುವ ಗಾಢಾಶ್ಲೇಷಗಳಿಂದ ಮುಚ್ಚಿಬಿಟ್ಟೆ.

ಅದು, ಈಗ ನಿನ್ನನ್ನು ಸಮಾಧಾನಪಡಿಸುವುದಕ್ಕೆ ಮಾತ್ರವೇ ಹೇಳತಕ್ಕದ್ದಲ್ಲ, ಸತ್ಯವೂ ಅಹುದು. ಆದುದರಿಂದ ಅದನ್ನು ನೆನಪಿಗೆ ತಂದುಕೊಳ್ಳಬೇಕು.

ಖರನೇ ಮೊದಲಾದ ರಾಕ್ಷಸರನ್ನು ಸೋಲಿಸಿ ಕೊಂದಮೇಲೆ, ನನ್ನನ್ನು ಗಾಢವಾಗಿ ಆಲಿಂಗಿಸಿ ಶತ್ರುಗಳ ಶಸ್ತ್ರಘಾತಗಳಿಂದಾದ ಗಾಯದ ವೇದನೆಯನ್ನು ಮರೆಯಿಸಿದೆ. ಈಗಲೂ ತಪ್ಪದೆ ಹಾಗೆಯೇ ಮಾಡುವೆ. ಇದರಲ್ಲಿ ಸ್ವಲ್ಪವೂ ಸಂದೇಹವಿಲ್ಲ. ಆದುಕಾರಣದಿಂದ ಈಗ ಹೇಳಿಕಳುಹಿಸುವ ಸಮಾಚಾರವು ನಂಬಲು ಯೋಗ್ಯವಾದುವುಗಳೇ.

ಟಿಪ್ಪಣಿ:—ಕುದಿಸಿದ ಔಷಧಿನೀರು ತುಂಬಿದ ಮಡಕೆಯ ಆಕಾರದ ಪಾತ್ರೆಯ ಬಾಯಿಂದ ಹೊರಟುಬರುತ್ತಿರುವ ಆವಿಯಿಂದ, ಶಾಖಕೊಟ್ಟು ವೈದ್ಯರು ಗಾಯಗಳ

ನೋವನ್ನು ಹೋಗಲಾಡಿಸುತ್ತಾರೆ. ಹಾಗೆ ಶಸ್ತ್ರದ ಗಾಯಗಳನ್ನು ಸಮಾಧಾನಪಡಿಸಿದಳು.

ಈ ಪದ್ಯದಲ್ಲಿ ಕವಿಯಿಂದ ವ್ರಣ ಚಿಕಿತ್ಸಾಶಾಸ್ತ್ರದ ಪರಿಶ್ರಮವು ಪ್ರಕಟಿತವಾಗಿದೆ.

ಮೇಲಿನಂತೆ ಗಾಯಗಳನ್ನು ಮಾಯಿಸುವ ಕ್ರಮವನ್ನು ಈಗಿನ ಆಸ್ಪತ್ರೆಗಳಲ್ಲಿ ವಿಮರ್ಶೆಯಿಂದ ಕಾಣಬಹುದು.

ಈ ಕವಿಯಿಂದ ವೈದ್ಯಶಾಸ್ತ್ರ ಗ್ರಂಥವೊಂದು ರಚಿತವಾಗಿದೆಯೆಂದೂ ತಿಳಿಯಬರುತ್ತದೆ.

* ಹಿಮವತ್ಪರ್ವತದಿಂದ ವಿಂಧ್ಯಪರ್ವತದವರೆಗಿನ ದೇಶಕ್ಕೆ ಆರ್ಯಾವರ್ತವೆಂದು ಹೆಸರು.

ವಿಂಧ್ಯದಿಂದ ಗೋದಾವರೀ ದಕ್ಷಿಣಕ್ಕೆ ಸ್ವಲ್ಪ ದೂರದವರೆಗೆ ಜನಸ್ಥಾನ. ಉತ್ತರದಿಂದ ವಲಸೆಬಂದ ಆರ್ಯರು ಇಲ್ಲಿ ವಾಸಿಸುತ್ತಿದ್ದರು. ಇದರ ದಕ್ಷಿಣಭಾಗವು ಸಾಮಾನ್ಯವಾಗಿ ರಾವಣನ ಅಧೀನವಾಗಿತ್ತೆಂದು ಹೇಳಬಹುದು.

ಆದರೂ, ತುಂಗಭದ್ರಾತೀರ ಋಶ್ಯಮೂಕಪರ್ವತ ಅದರ ಸುತ್ತಮುತ್ತಿನ ಪರ್ವತಪ್ರದೇಶಗಳು ವಾಲಿಸುಗ್ರೀವರೆಂಬ ಕಪಿವೀರರಿಗೆ ಸೇರಿ ಸ್ವತಂತ್ರವಾಗಿತ್ತು. ಲಂಕಾದ್ವೀಪವಂತೂ ರಾವಣನ ಸ್ವಂತರಾಜ್ಯವೇ ಆಗಿತ್ತು.

‡ ವಕ್ಷೋಜಕಲಶಗಳ. ಆನಂದಬಾಷ್ಪ=ಸಂತೋಷವಾದಾಗ ಬರುವ ಕಣ್ಣೀರು. ಬಾಷ್ಪ=ಊಷ್ಮ, ಹಬೆ, ಆವಿ, ಕಾಹು.

## ಪದ್ಯ ೪೬.

ಶಚ್ಯಾಃ ಕ್ಲೇಶಂ ಕ್ವಚನ ಸಮಯೇ ತಾದೃಶಂ ಚಿಂತಯಿತ್ವಾ
ಸ್ಮೃತ್ವಾ ದೇವೀಮಚಲತನಯಾಂ ವಿಪ್ರಯುಕ್ತಾಂ ಶಿವೇನ |
ರಕ್ಷಾತ್ಮಾನಂ ಕಥಮಪಿ ಶುಭೇ ಜೀವಿತಾಲಂಬನಂ ಮೇ
ಪತ್ಯುಃ ಛಂದಾತ್ ವ್ಯಸನಮಪಿ ಹಿ ಶ್ಲಾಘನೀಯಂ ವಧೂನಾಂ ||

ದೇವರ ದಯೆಯು ಕಡಿಮೆಯಾಗಿ ಹೋಗಿದ್ದ ಒಂದು ಸಂದರ್ಭದಲ್ಲಿ, ಶಚೀದೇವಿಗೆ ಗಂಡನ ಅಗಲಿಕೆಯಿಂದಲೂ, ಇಂದ್ರನ ಪದವಿಗೆ ಬಂದಿದ್ದ ನಹುಷನ ಹಿಂಸೆಯಿಂದಲೂ ಒದಗಿದ ಹೆದರಿಕೆಯಿಂದ ಉಂಟಾದ ಆ ದುಃಖವನ್ನೂ ಚೆನ್ನಾಗಿ ಆಲೋಚಿಸಿನೋಡು.

ಮತ್ತೊಂದು ಸಂದರ್ಭದಲ್ಲಿ, ದಕ್ಷನಮಗಳಾದ ಈಶಾನನ ಪಟ್ಟದರಾಣಿಯೆನಿಸಿಕೊಂಡ ಸತೀದೇವಿಯನ್ನೂ ನೆನಪಿಗೆ ತಂದು

ಕೊಂಡು ಹೇಗೋ ಕಷ್ಟದಿಂದ ದೇಹವನ್ನು ಕಾಪಾಡಿಕೋ (ಸತೀದೇವಿಯಂತೆ ದೇಹತ್ಯಾಗಮಾಡಬೇಡ, ಶಚೀದೇವಿಯಂತೆ ಎಲ್ಲ ವಿಧದಿಂದಲೂ ದೇಹರಕ್ಷಣೆಮಾಡಿಕೊಳ್ಳಬೇಕು.)

ನಿನ್ನ ಆತ್ಮಧಾರಣವು ನನ್ನ ಪ್ರಾಣಧಾರಣೆಗೂ ಕಾರಣವಾಗುವುದು. ನನಗೆ ನಿನ್ನನ್ನು ಹೊರ್ತು ದೇಹಧರಿಸಲು ಸಾಮರ್ಥ್ಯವಿಲ್ಲ. (ಪ್ರಾಣಧಾರಣಕ್ಕೆ ಮೂಲಕಾರಣವು ದೇಹವಾದುದರಿಂದ ಖಂಡಿತವಾಗಿಯೂ ಅದು ರಕ್ಷಿತವಾಗಬೇಕು. ನೀನಾದರೋ ನಾನು ಹೇಳಿದಂತೆ ಆತ್ಮರಕ್ಷಣಮಾಡಿಕೊಳ್ಳದೇ ಹೋದರೆ ನೀನು ನಿನಗೆ ಮಾತ್ರವೇ ದ್ರೋಹಮಾಡಿದಂತಾಗುವುದಿಲ್ಲ, ನನಗೂ ಮಾಡಿದಂತಾಗುತ್ತದೆ.)

ಗುಣವಂತಳೇ, ನಿನ್ನನ್ನು ನೀನು ರಕ್ಷಿಸಿಕೋ. ಪತಿವ್ರತಾ ಸ್ತ್ರೀಯರು ಪ್ರಾಣಪ್ರಿಯನ ಅಭಿಪ್ರಾಯವನ್ನು ಅನುಸರಿಸಿ ಅನುಭವಿಸುತ್ತಿರುವ ದುಃಖವೂ (ಕೇಡೂ) ಎಲ್ಲಾ ಲೋಕಗಳಲ್ಲೂ ಹೊಗಳಿಸಿಕೊಳ್ಳತಕ್ಕದ್ದೇ ಆಗಿದೆ. ಇದು ಯಾರಿಂದಲೂ ಯಾವಾಗಲೂ ನಿಂದಿತವಾಗತಕ್ಕದ್ದೇ ಅಲ್ಲ.

ಟಿಪ್ಪಣಿ:—ಉತ್ತಮನಾಯಕನು ಪತಿವ್ರತಾರಮಣಿಗೆ ಹೇಳುವ ಬುದ್ಧಿವಾದವು ಈ ಪದ್ಯದಲ್ಲಿದೆ.

* ದಾಕ್ಷಾಯಣೀ.

**ಪದ್ಯ ೪೭.**

ಅಪ್ಯೇತತ್ತೇ ಮನಸಿ ನಿಹಿತಂ ಸಾಹ್ಯಮವ್ಯಾಜಬಂಧೋಃ
ಪ್ರತ್ಯಾಖ್ಯಾತುಂ ಪ್ರಭವತಿ ನ ಖಲ್ವಾನೃಶಂಸ್ಯಂ ತ್ವದೀಯಂ ।
ಪ್ರಾಗಪ್ಯೇವಂ ಪರಿಣತಗುಣಾಂ ನೈಷಧೇ ವೀಕ್ಷ್ಯ ವಾರ್ತಾಂ
ಆರ್ತತ್ರಾಣಂ ವ್ರತಮಿತಿ ವಿದುರ್ಹಂಸ ಶುದ್ಧಾತ್ಮನಾಂ ವಃ ॥

ಎಲೈ ಹಂಸವೇ, ಸಹಜವಾಗಿಯೇ ಸ್ನೇಹಿತನಾದ ನಿನ್ನ ಮನಸ್ಸಿನಲ್ಲಿ ನನ್ನಿಂದ ಪ್ರಾರ್ಥಿತವಾದ ಸಂದೇಶವನ್ನು ತೆಗೆದುಕೊಂಡು ಹೋಗುವುದೆಂಬ ಸಹಾಯವು ಮಾಡಿಯೇತೀರಬೇಕೆಂದು ನಿಷ್ಕರ್ಷಿಸಲ್ಪಟ್ಟಿದೆ ತಾನೇ. ?

ಇತರರ ದುಃಖವನ್ನು ಹೋಗಲಾಡಿಸಬೇಕೆಂಬ ನಿನ್ನ * ಇಚ್ಛೆಯು ವಾಚಿಕವನ್ನು ತೆಗೆದುಕೊಂಡು ಹೋಗಬೇಕೆಂಬ ಸಹಾಯವನ್ನು ತಿರಸ್ಕರಿಸುವುದಕ್ಕೆ ಯೋಗ್ಯವಾಗುವುದಿಲ್ಲವಷ್ಟೇ. ?

ಹಿಂದೆಯೂ, ಹೀಗೆ ನಳಮಹಾರಾಜನ ವಿಷಯದಲ್ಲಿ ‡ ಸಫಲವಾದ ಸೌಜನ್ಯವುಳ್ಳ ಹಂಸ † ವೃತ್ತಾಂತವನ್ನು ಚೆನ್ನಾಗಿ ಆಲೋಚಿಸಿ ನೋಡಿ, ನಿರ್ಮಲವಾದ ದೇಹ ಮತ್ತು ಮನಸ್ಸುಳ್ಳ ನಿಮಗೆ, ನಮ್ಮಂಥ ದೀನರ (ಕಷ್ಟದಲ್ಲಿ ಸಿಕ್ಕಿಕೊಂಡವರ) ರಕ್ಷಣವನ್ನೇ ನಿಯಮವನ್ನಾಗಿ ತಿಳಿಯುತ್ತಾರೆ.

ನಿನ್ನಲ್ಲಿ ಆರ್ತತ್ರಾಣಪರಾಯಣತೆ ಇರುವುದರಿಂದಲೇ ಒಳ್ಳೆಯತನವಿದೆ. ಅದರಿಂದ ನೀನು ನನಗೆ ಮಾಡಬೇಕಾದ ಸಹಾಯವನ್ನು ಮಾಡದಿರಲು ಯೋಗ್ಯನಲ್ಲವೇ ಅಲ್ಲ. ನೀನು ನನಗೆ ಆವಶ್ಯಕವಾಗಿ ಸಹಾಯಮಾಡಿಯೇ ಮಾಡುತ್ತೀಯೆ.

ಟಿಪ್ಪಣಿ:—* ಒಳ್ಳೆಯತನ.
‡ ಪರಿಪಕ್ವವಾದ.
† ನಡೆವಳಿಕೆ.

**ಪದ್ಯ ೪೮.**

ಇತ್ಥಂ ಹೃದ್ಯೈರ್ಜನಕತನಯಾಂ ಜೀವಯಿತ್ವಾ ವಚೋಭಿಃ
ಸಖ್ಯಂ ಪುಷ್ಯನ್ ದಿನಕರಕುಲೇ ದೀಪ್ಯಮಾನೈಃ ನರೇಂದ್ರೈಃ ।
ಸ್ವೈರಂ ಲೋಕಾನ್ ವಿಚರ ನಿಖಿಲಾನ್ ಸೌಮ್ಯ ಲಕ್ಷ್ಮ್ಯೇವ ವಿಷ್ಣುಃ
ಸರ್ವಾಕಾರೈಃ ತ್ವದನುಗುಣಯಾ ಸೇವಿತೋ ರಾಜಹಂಸ್ಯಾ ॥

ಮೇಲೆ ಹೇಳಿದಂತೆ * ಮನೋಹರವಾಗಿರುವ ಸಂದೇಶದ ಮಾತುಗಳಿಂದ ಸೀತೆಯನ್ನು ಬದುಕಿಸಿ, ಯೋಗ್ಯವಾದ ಗುಣಗಳಿಂದ

ಪ್ರಖ್ಯಾತರಾದ ಸೂರ್ಯವಂಶದ ರಾಜರೊಡನೆ ಗೆಳೆತನವನ್ನು, ‡ ಅಭಿವೃದ್ಧಿಪಡಿಸಿಕೊಳ್ಳುತ್ತಿರು.

ಕರುಣೆ ಸ್ನೇಹ ಮುಂತಾದ ಗುಣಗಳಿಂದ ಯಾವಾಗಲೂ ನಿರ್ಮಲವಾದ ಮನಸ್ಸುಳ್ಳವನೇ, ಲಕ್ಷ್ಮೀದೇವಿಯಿಂದ ನಾರಾಯಣನಂತೆ, ಶೀಲ ರೂಪ ವಯಸ್ಸು ಮುಂತಾದ ಎಲ್ಲ ಸಂದರ್ಭಗಳಿಂದಲೂ ನಿನಗೆ ತಕ್ಕವಳಾದ (ಈಡಾಗಿರುವ) ನಿನ್ನ ಪತ್ನಿಯಿಂದ (ರಾಜಹಂಸಿ) ಕೂಡಿಕೊಂಡು † ಮನಸ್ಸಿಗೆಬಂದಂತೆ ಎಲ್ಲ ಲೋಕಗಳನ್ನೂ ಸಂಚರಿಸು.

ಇಂತಹ ಸಂದೇಶವನ್ನು ಸೀತೆಗೆ ತೆಗೆದುಕೊಂಡುಹೋಗಿ ಕೊಡುವುದೆಂಬ (ಖುದ್ದಾಗಿ ತಲಪಿಸುವುದೆಂಬ) ಅಂತರಂಗದ ವಾಚಿಕಸೇವೆಯಿಂದ ನೀನು, ಲಕ್ಷ್ಮೀಪತಿಯಾದ ನನ್ನೊಡನೆ ಸರ್ವ ಲೋಕಗಳನ್ನೂ ಅನುಸರಿಸಿ ಸಂಚರಿಸುವ ಲಕ್ಷಣವುಳ್ಳ ಮುಕ್ತೈಶ್ವರ್ಯವನ್ನು ಹೊಂದುವೆಯೆಂಬ ಹಾರ್ದವಾದ ಅಭಿಪ್ರಾಯವು ಶ್ರೀರಾಮನಿಂದ ಸೂಚಿತವಾಗಿದೆ.

ಟಿಪ್ಪಣಿ:—* ಚಿತ್ತರಂಜಕವಾಗಿರುವ.

‡ ಬೆಳೆಯುವಂತೆ ಮಾಡಿಕೊಳ್ಳುತ್ತಾ.

† ಭಗವಂತನು ಎಲ್ಲ ಲೋಕಗಳನ್ನೂ ಮನಬಂದಂತೆ ಸಂಚರಿಸುವಂತೆ ನೀನೂ ಮಾಡು. ಹಾರ್ದವಾದ=ಸರಿಯಾದ, ಉತ್ತಮವಾದ, ತಲಸ್ಪೃಕ್ಕಾದ, ಮನಸ್ಸಿಗೆ ಒಪ್ಪುವ.

**ಪದ್ಯ ೪೯.**

ಸಂದಿಶ್ಯೈವಂ ಸಹ ಕಪಿಕುಲೈಸ್ಸೇತುನಾ ಲಂಘಿತಾಬ್ಧಿಃ
ಪಙ್ಕ್ತಿಗ್ರೀವೇ ಯುಧಿ ವಿನಿಹತೇ ಪ್ರಾಪ್ಯ ಸೀತಾಂ ಪ್ರತೀತಃ ।
ರಾಜ್ಯಂ ಭೂಯಸ್ಸ್ವಯಮನುಭವನ್ ರಕ್ಷಿತಂ ಪಾದುಕಾಭ್ಯಾಂ
ರಾಮಶ್ಶ್ರೀಮಾನ್ ಅತನುತ ನಿಜಾಂ ರಾಜಧಾನೀಂ ಸನಾಥಾಂ ॥

ಹಿಂದೆ ಹೇಳಿದಂತೆ, ಸೀತೆಗೆ ತೆಗೆದುಕೊಂಡುಹೋಗಿ * ತಲಪಿಸಬೇಕಾದ, ತಾನು ಕಳುಹಿಸಿಕೊಡುವ ಸಮಾಚಾರವನ್ನು, ಹಂಸಕ್ಕೆ

ತಿಳಿಯಪಡಿಸಿ, ಕಪಿಸೇನೆಯೊಡನೆ (ಸುಗ್ರೀವಸೇನೆ) ‡ನಳನಿಂದ ನಿರ್ಮಿತವಾದ ಸೇತುವಿಂದ ರಾಮನು ಸಮುದ್ರವನ್ನು ದಾಟಿದನು.

ರಾವಣನು ಯುದ್ಧದಲ್ಲಿ, ತನ್ನಿಂದಲೂ (ರಾಮ), ತನ್ನ ಕಡೆಯವರಿಂದಲೂ, ಸಂಪೂರ್ಣವಾಗಿ ನಾಶಹೊಂದಲು, ರಾಮನು ಸೀತೆಯನ್ನು ಸೆರೆಯಿಂದ ಬಿಡಿಸಿ, ತನ್ನ ಅಧೀನಕ್ಕೆ ತೆಗೆದುಕೊಂಡು ಪ್ರಸಿದ್ಧನೂ ಸಂತುಷ್ಟನೂ ಆದನು.

ಚಿತ್ರಕೂಟಪರ್ವತದಲ್ಲಿ, ಭರತನಿಗೆ ತಾನು ಹಿಂದೆ ಕೊಟ್ಟ ಪಾದುಕೆಗಳಿಂದ ಉತ್ತಮವಾಗಿ ಅಭಿವೃದ್ಧಿಪಡಿಸಿ, ಪಾಲಿತವಾದ ರಾಷ್ಟ್ರವನ್ನು ಈಗ, ತಾನೇ ಆಳುತ್ತ, ಅಪ್ರತಿಹತವಾದ ಅಧಿಕಾರವುಳ್ಳ ರಾಮನು, ಅಯೋಧ್ಯೆಯೆಂದು ಪ್ರಸಿದ್ಧವಾದ ತನ್ನ ರಾಜಧಾನಿಯನ್ನು ಸರ್ವೋತ್ತಮವಾದ † ಆಳಿಕೆಯುಳ್ಳದ್ದನ್ನಾಗಿ ಮಾಡಿದನು.

ಟಿಪ್ಪಣಿ:—* ಕೊಡಬೇಕಾದ.

‡ ರಾಮನಕಡೆಯಿದ್ದ ಶಿಲ್ಪಿ. (ಮಿಲಿಟರಿ ಎಂಜನಿಯರ್.)

† ಪ್ರಭುತ್ವ. ಸೇತುವಿಂದ=ಸೇತುವಿನಿಂದ. ತನ್ನ ಕಡೆಯವರು=ಲಕ್ಷ್ಮಣ ಹನುಮಂತ ಸುಗ್ರೀವಾದಿಗಳು.

### ಪದ್ಯ ೫೦.

ವಿದ್ಯಾಶಿಲ್ಪಪ್ರಗುಣಮತಿನಾ ವೇಂಕಟೇಶೇನ ಕ್ಲಪ್ತಂ
ಚಿಂತಾಶಾಣೋಲ್ಲಿಖಿತಮಸಕೃತ್ ಶ್ರೇಯಸಾಂ ಪ್ರಾಪ್ತಿಹೇತುಂ |
ಸೀತಾರಾಮವ್ಯತಿಕರಸಖಂ ಹಂಸಸಂದೇಶರತ್ನಂ
ಪಶ್ಯಂತ್ವಂತಶ್ಶ್ರವಣಮನಘಂ ಚಕ್ಷುರುಜ್ಜೀವ್ಯ ಸಂತಃ ||

ಸುಪ್ರಸಿದ್ಧವಾದ ಅನೇಕ ವಿದ್ಯೆಗಳ ಪರಿಶೀಲನಪರಿಷ್ಕರಣಗಳೆಂಬ ಕೆಲಸವನ್ನೇ ಕುಶಲವಿದ್ಯೆಗಳನ್ನಾಗಿಯುಳ್ಳ,

ರತ್ನಗಳನ್ನು ಕಡೆಯುವುದೇ (ಕಡೆತಕ್ಕೆ ಕೊಡುವುದೇ) ಮುಖ್ಯವಾದ ಕೆಲಸವನ್ನಾಗಿಯುಳ್ಳ,

ಆ ವಿದ್ಯೆಗಳ ಪರಿಶೀಲನದಿಂದ ಸರಿಯಾದ ತೀಕ್ಷ್ಣಬುದ್ಧಿಯುಳ್ಳ, (ಆಗಿನಕಾಲದಲ್ಲಿ ಸುಪ್ರಸಿದ್ಧವಾದ ಎಲ್ಲ ಶಾಸ್ತ್ರಗಳಲ್ಲೂ ಸರಿಯಾದ ತಿಳಿವಳಿಕೆಯುಳ್ಳ) ವೆಂಕಟೇಶಕವಿಯಿಂದ,

ಅನೇಕಸಲ ಚಿಂತೆಯೆಂಬ ಒರೆಗಲ್ಲಿನಿಂದ (ಚಿತ್ತೈಕಾಗ್ರ್ಯ) ಪ್ರೇರಿತವಾಗಿ (ಪ್ರೋತ್ಸಾಹಿತವಾಗಿ) ಧರಿಸುವುದಕ್ಕೆ ಯೋಗ್ಯವಾಗಿ * ಮಾಡಿದ, ಈ ಕಾವ್ಯವು ಬಹಳ ಜಾಗರೂಕತೆಯಿಂದ ರಚಿತವಾಗಿ ಸುಗುಣಗಳಿಂದ ಕೂಡಿಕೊಂಡಿದೆ.

ಪುನಃ ಪುನಃ ಒಳ್ಳೆಯಫಲಗಳನ್ನು ಪಡೆಯಲು ಸಹಾಯಕವಾದುದು.

ಅಗಲಿರುವ ಸೀತಾರಾಮರಿಗೆ ಸಮಾಗಮವುಂಟುಮಾಡಲು ಯೋಗ್ಯವಾದುದು. ರಾಮನು, ಹಂಸಕ್ಕೆ ಹೇಳಿದ ಒಳ್ಳೆಯಮಾತುಗಳೆಂಬ ಉತ್ತಮವಾದ ಈ ರತ್ನವನ್ನು ಸ್ನೇಹಬುದ್ಧಿಯುಳ್ಳ ವಿದ್ವಾಂಸರು (ಒಳ್ಳೆಯದು ಕೆಟ್ಟದ್ದನ್ನು ವಿಚಾರಿಸಿ ತಿಳಿಯಬಲ್ಲವರು.) ಕಿವಿಯೊಳಗಿರುವ ಪರಿಶುದ್ಧವಾದ ಎಲ್ಲಕ್ಕಿಂತಲೂ ಮೇಲಾದ ಚಕ್ಷುರಿಂದ್ರಿಯವನ್ನು (ಜ್ಞಾನವನ್ನು) ಅವಲಂಬಿಸಿ ನೋಡಲಿ ಅಥವಾ ಕೇಳಲಿ.

ಟಿಪ್ಪಣಿ:-- ಈ ಪದ್ಯದಲ್ಲಿ ಸೊಗಸಾದ ಎರಡು ಅರ್ಥಗಳಿವೆ.

೧ ಉತ್ತಮಕವಿಗೆ ಸಂಬಂಧಿಸಿದುದು.

೨ ಗಣಿಯಿಂದ ಮೇಲಕ್ಕೆ ತೆಗೆದ ರತ್ನವನ್ನು ಸಾಣೆಗೆಕೊಟ್ಟು ಆಭರಣಮಾಡತಕ್ಕವನ ಕೌಶಲ್ಯಕ್ಕೆ ಸಂಬಂಧಪಟ್ಟದ್ದು. ಮಾಡಿದ=ರಚಿತ.

**ಕರ್ಣಾಟಕ ಹಂಸಸಂದೇಶದಲ್ಲಿ ಎರಡನೆಯ ಆಶ್ವಾಸವು ಮುಗಿಯಿತು.**

ಸಂಪೂರ್ಣಂ.



**Vanivilas Mohalla, MYSORE,**

5th July 1938.

It gives me great pleasure to state that I have glanced through the Kannada translation of Sri Vedantacharya Venkatanatha's 'HAMSA SANDESA,' by Pandit Sriman H. Gopala Krishnamacharya of Marimallappa's High School, Mysore The Rendering is praiseworthy. The beauties of the original are well brought out. The Language is simple and elegant. The learned author deserves to be really congratulated on this popular presentation of an interesting portion of the Ramayana.

(*Sd.*) **V. SUBRAHMANYA IYER,**

*Retired Registrar, Mysore University.*

Mahamahopadhyaya
Arthasastravisarada, Vidyalankara
**Panditaraja Dr. R. Shamasastry,**

" ASUTOSH " Chamundi Extension,
Mysore,
10—6—1938.

I went through Pandit H. Gopalakrishnamachar's Karnataka Hamsasandesa with great pleasure. It is a faithful translation of Vedanta Desika's Sanskrit Hamsasandesa into intelligible elegant Kannada Prose and deserves publication.

(*Sd.*) **R. Shamasastry.**

ಮೈಸೂರು,

೧೬—೬—೧೯೩೮.

ಶ್ರೀಮಾನ್ ಎಚ್. ಗೋಪಾಲಕೃಷ್ಣಮಾಚಾರ್ಯರವರು ಕನ್ನಡಗದ್ಯದಲ್ಲಿ ಬರೆದಿರುವ "ಹಂಸಸಂದೇಶ" ಕಾವ್ಯದ ಭಾಷಾಂತರವನ್ನು ನಾನು ಓದಿ ನೋಡಿದೆನು. ವೇದಾಂತಾಚಾರ್ಯರ ಗ್ರಂಥದ ಸಾರವು ಕನ್ನಡಿಗರಿಗೆ ಗೋಚರವಾಗುವಂತೆ ಮಾಡಿರುವ ಈ ಉಪಕಾರವು ಸಾಮಾನ್ಯವಾದುದಲ್ಲ. ಸರಳವಾದ ಶೈಲಿಯಲ್ಲಿ ಉತ್ತಮರೀತಿಯಲ್ಲಿ ಶ್ರೀಮಾನ್ ಎಚ್. ಗೋಪಾಲಕೃಷ್ಣಮಾಚಾರ್ಯರು ಈ ಗದ್ಯಾನುವಾದವನ್ನು ರಚಿಸಿದ್ದಾರೆ. ಅವರ ಗ್ರಂಥಕ್ಕೆ ತಕ್ಕಷ್ಟು ಪ್ರೋತ್ಸಾಹವು ದೊರೆಯುವುದೆಂದು ನಂಬಿದ್ದೇನೆ.

(*Sd.*) **ಸಿ. ಕೆ. ವೆಂಕಟರಾಮಯ್ಯ,**
M.A., LL.,B.,

It is a happy feature that capable vidwans are interesting themselves in popularising Sandesa Kavyas in Sanskrit by translating them into Kannada. It was Bra. Mahavidwan Kukke Subrahmanya Sastry of Shimoga who paved the way by bringing out a translation of Kalidasa's Megha Sandesa in Kannada Verse. It gives me much pleasure to see that Sriman H. Gopalakrishnamacharya, Pandit of the Marimallappa's High School, has continued the series by giving a free rendering of Vedanta Desikar's Hamsa Sandesa in easy Kannada Prose.

The Pandit was kind enough to take me through his work, here and there. What specially appealed to me was the great pains taken by him to make the work more useful by giving, in the shape of foot notes, the salient points, both ethical and philosophical, from the exhaustive commentary thereon by H. H. the Parakala Swami.

I daresay that this first enterprise of his will have a generous response at the hands of all Kannada loving people, which, doubtless, would encourage him to bring out some more attempts of his awaiting publication.

Mysore,
24th June 1938.

(*Sd.*) ***S. B. Krishnamoorthy,***
Principal,
Maharaja's Sanskrit College, Mysore.

M. S. BASAVALINGAYYA, M.A., B.L.,
CURATOR,
GOVERNMENT ORIENTAL LIBRARY.

MANGALADHAMA,
860. NARAYANA SASTRY ROAD
MYSORE.

24—9—1938.

ವೇದಾಂತಾಚಾರ್ಯರೆಂದು ಸುಪ್ರಸಿದ್ಧರಾದ ಶ್ರೀ ವೇಂಕಟನಾಥ ಮಹಾಕವಿಗಳಿಂದ ರಚಿತವಾದ ಅತ್ಯುತ್ತಮಕಾವ್ಯಗಳಲ್ಲಿ 'ಹಂಸಸಂದೇಶ' ವೆಂಬುದೂ ಒಂದಾಗಿದೆ ಸಂಸ್ಕೃತಭಾಷಾತ್ಮಕವಾದ ಈ ಕಾವ್ಯದ ರಸಾಸ್ವಾದನೆಯು ಕನ್ನಡಿಗರಿಗೂ ಲಭಿಸಲೆಂಬ ಉದ್ದೇಶದಿಂದ ಮರಿಮಲ್ಲಪ್ಪನವರ ಹೈಸ್ಕೂಲಿನಲ್ಲಿ ಕನ್ನಡ ಉಪಾಧ್ಯಾಯರಾಗಿರುವ ಶ್ರೀಮಾನ್ ಪಂಡಿತ ಎಚ್. ಗೋಪಾಲಕೃಷ್ಣಮಾಚಾರ್ಯರು ಇದನ್ನು ಕನ್ನಡಿಸಿ 'ಕರ್ಣಾಟಕ ಹಂಸಸಂದೇಶ' ವೆಂಬ ಹೆಸರಿನಿಂದ ಮುದ್ರಿಸಿರುವ ಪುಸ್ತಕದಲ್ಲಿ ಕೆಲವು ಭಾಗವನ್ನು ಓದಿನೋಡಿದೆನು. ಸಂಸ್ಕೃತಪದ್ಯಗಳಲ್ಲಿ ಅಡಗಿರುವ ರಸಭಾವಾದಿಗಳನ್ನು ಪರಿವರ್ತನಕಾರರು ಸುಲಭವಾಗಿ ಬೋಧೆಯಾಗುವಂತೆ ಕನ್ನಡದಲ್ಲಿ ಬರೆದಿರುವರಲ್ಲದೆ, ಅನೇಕ ಕಡೆ ಟಿಪ್ಪಣಿಗಳ ಮೂಲಕ ವಿಶೇಷ ವಿಷಯಗಳನ್ನೂ ಗೂಢಾರ್ಥಗಳನ್ನೂ ತಿಳಿಸಿರುತ್ತಾರೆ. ಗೀರ್ವಾಣಭಾಷಾಸಾಗರದಲ್ಲಿ ಅಡಗಿರುವ ಹಂಸಸಂದೇಶದಂತಹ ಅನಂತಗ್ರಂಥರತ್ನಗಳನ್ನು ಕನ್ನಡಿಸಿ ಪ್ರಕಟಿಸಿದರೆ, ಆ ಮೂಲಕ ಕನ್ನಡ ಭಾಷೆಯು ಮತ್ತಷ್ಟು ಪುಷ್ಟವೂ ಹೃಷ್ಟವೂ ಆಗಿ, ಅದರ ಜ್ಞಾನಕೋಶವು ವಿಸ್ತರಿಸುತ್ತ ಹೋಗುವುದು. ಈ ದೃಷ್ಟಿಯಿಂದ ಪರಿವರ್ತನೆಯ ಉದ್ಯಮವೂ ಸಹ ಕನ್ನಡತಾಯಿಯ ಸೇವೆಯಲ್ಲಿಯೇ ಸೇರುವುದರಿಂದ, ಇಂತಹ ಭಾಷಾಸೇವೆಯಲ್ಲಿ ತೊಡಗಿರುವ ಶ್ರೀಮಾನ್ ಎಚ್ ಗೋಪಾಲಕೃಷ್ಣಮಾಚಾರ್ಯರು ಕನ್ನಡಭಾಷಾಭಿಮಾನಿಗಳೆಲ್ಲರ ಪ್ರೋತ್ಸಾಹಕ್ಕೂ ಆದರಕ್ಕೂ ಪಾತ್ರರಾಗುವುದರಲ್ಲಿ ಸಂಶಯವೇನೂ ಇರಲಾರದು. ಇವರಂತೆಯೇ ಇವರು ಇನ್ನೂ ಅನೇಕ ಸಂಸ್ಕೃತಗ್ರಂಥಗಳನ್ನು ಕನ್ನಡಕ್ಕೆ ಭಾಷಾಂತರಿಸಿ, ಕನ್ನಡನಾಡಿಗೂ, ನುಡಿಗೂ ಉಪಕಾರವೆಸಗಲೆಂದು ಬಯಸುತ್ತೇನೆ.

(*Sd.*) ಎಂ. ಎಸ್. ಬಸವಲಿಂಗಯ್ಯ.

***Vidwan C. Hanumanthachar,*** *M.A.,*

Lecturer, Training College, (Retd.)

MYSORE.

Pandit H. Gopala Krishnamachar has been known to me ever since he was my student in the Kannada Pandit's Class of the College. As a student he evinced much interest in his studies. It is a source of pleasure to me that he has undertaken to render into Kannada the **Hamsa-sandesa** a Sanskrit Poem by Sri Vedantacharya, a Celebrated Philosopher and Poet. The language of the Kannada **Hamsasandesa** is easy and elegent. I trust it will win a great popularity among those who are interested in Kannada Literature.

Mysore,
20th August 1938.

(*Sd.*) **C. Hanumanthachar.**

|| ಶ್ರೀಃ ||

## ಪ್ರಸೀದತಾತ್ ಸೈನ್ಧವಕನ್ಧರಂ ಮಹಃ ।

ಸುವಿದಿತಮೇವೈತತ್ ಅಶೇಷಾಣಾಮಪಿ ವಿಪಶ್ಚಿದಪಶ್ಚಿಮಾನಾಂ ಸರಸಸಾಹಿತೀನಿಷ್ಣಾತಾನಾಂ,

ಯದುತ ಪವಮಾನನಂದನಮುಖಸಮಧಿಗತಜನಕಜೋದಂತಕರಘುನಂದನಪರಿಚೋದಿತಹಂಸಮುಖಸಂದಿಶ್ಯಮಾನಜಾನಕೀಸಮಾಶ್ವಾಸನಚಣಸಂದೇಶಪರಿಕರ್ಮಿತಂ ನಿಖಿಲರಸಾಲಂಕೃತಿಭರಿತಂ ಶ್ರೀಹಂಸಸಂದೇಶಾಭಿಧಾನಮುತ್ತಮಕಾವ್ಯರತ್ನಂ ವಿರಾಜತೇ ಜಗತೀತಲ ಇತಿ ।

ಯಸ್ಯಾಸ್ಯ ಕಾವ್ಯರತ್ನಸ್ಯ ಕವಯಿತಾರೋಭವ್ಯತಮನಿಜಾವತರಣಪವಿತ್ರೀಕೃತಕಾಂಚೀಮಂಡಲಾಃ ಸರ್ವತಂತ್ರಸಂಕಟಪ್ರಶಮನವಿಶಂಕಟಧಿಷಣಾಃ ಶ್ರೀಮದ್ರಂಗಾಧಿರಾಜಸಮನುಗೃಹೀತ ವೇದಾಂತಾಚಾರ್ಯಾಭಿಧಾನಾಃ ಕವಿತಾರ್ಕಿಕಸಿಂಹಾಃ ಸುಪ್ರತೀತಾಃ ಶ್ರೀವೇಂಕನಾಥಸೂರಿವರ್ಯಾಃ ।

ಅದಸೀಯೇಽಪ್ಯಸ್ಮಿನ್ ಕಾವ್ಯರತ್ನೇ ಸುನಿಪುಣನಿರೂಪಿತಾ ಅಪಿ ಭಾವಾವೀಚೀತರಂಗನೀತ್ಯಾ ಪುನಃಪುನರುನ್ಮಿಷಂತ್ಯೇವೇತ್ಯೇತತ್ಕಾವ್ಯರತ್ನಪರಿಶೀಲನಚುಂಚೂನಾಂ ಸಹೃದಯಾನಾಮತಿರೋಹಿತಂ ।

ಅತಏವಕಿಲಸಕಲಶಾಸ್ತ್ರಮರ್ಮಜ್ಞೈರಾಲಂಕಾರಿಕಮೂರ್ಧನ್ಯೈಃ ಶ್ರೀಮದ್ಭಿರಪ್ಪಯಮಖೀಂದ್ರೈರದಸೀಯಯಾದವಾಭ್ಯುದಯಮಹಾಕಾವ್ಯಂ ವಿವೃಣ್ವಾನೈಸ್ತತ್ರತತ್ರ ಬಹುವಿಧಭಾವೋನ್ನಯನಪ್ರವೃತ್ತೈರಪ್ಯಪಾರಯದ್ಭಿಃ ಚಿತ್ರೀಯಮಾಣಮಾನಸೈಃ ಸಭಕ್ತ್ಯುನ್ಮೇಷಂ ।

“ಇತ್ಥಂವಿಚಿಂತ್ಯಾಃ ಸರ್ವತ್ರ ಭಾವಾಸ್ಸಂತಿ ಪದೇಪದೇ ।
ಕವಿತಾರ್ಕಿಕಸಿಂಹಸ್ಯ ಕಾವ್ಯೇಷು ಲಲಿತೇಷ್ವಪಿ ॥” ಇತ್ಯುದಘೋಷಿ.

ತತ್ತಾದೃಶಕವಿಸಾರ್ವಭೌಮಾನುಗೃಹೀತಸ್ಯಾಸ್ಯ ಕಾವ್ಯರತ್ನಸ್ಯ ಅನುಗುಣಾ ಶ್ರೀಮನ್ಮಹೀಮಂಡಲಮಂಡನಾಯಮಾನ ಕರ್ಣಾಟಜನಪದಭಾಗಧೇಯಭೂತ ಶ್ರೀಬ್ರಹ್ಮತಂತ್ರಪರಕಾಲದಿವ್ಯಾಸ್ಥಾನ್ಯಭಿಷಿಕ್ತೈರಧಿಗತಸಕಲಶಾಸ್ತ್ರರಹಸ್ಯೈರಧ್ಯಕ್ಷಿತಸಿದ್ಧಶಾಸ್ತ್ರತತ್ವೈಃ ಸಾಹಿತೀಜಲನಿಧಿಪಾರದೃಶ್ವಭಿಸ್ತತ್ರಭವದ್ಭಿಃ ಶ್ರೀಕೃಷ್ಣಬ್ರಹ್ಮತಂತ್ರಪರಕಾಲಸಂಯಮೀಂದ್ರೈರನುಗೃಹೀತಾ ಯಥಾರ್ಥಾಭಿಧಾನಾ ರಸಾಸ್ವಾದಿನ್ಯಭಿಖ್ಯಾ ವ್ಯಾಖ್ಯಾ ಶಬ್ದಾರ್ಥಸೌಷ್ಠವರಸಾಲಂಕೃತ್ಯಾದಿಪ್ರಕಾಶನಪಟೀಯಸೀ ಸಾಹಿತ್ಯಸೌಹಿತ್ಯಮಾಕಾಂಕ್ಷಮಾಣಾನಾಂ ಬಹೂಪಕುರ್ವಾಣಾ ದರೀದೃಶ್ಯತೇ ॥

ತದಿದಾನೀಂ ಈದೃಶವ್ಯಾಖ್ಯಾಪರಿಭೂಷಿತೇ ಕಾವ್ಯರತ್ನೇ ಗೈರ್ವಾಣವಾಣೀ ವೈದೇಶಿಕಾನಾಂ ಪರಿಚಿತಕರ್ಣಾಟಭಾಷಾಣಾಮಪಿ ರಸಾಸ್ವಾದಮಾಕಲಯಿತುಮಪರೀ ಕೃತಸುಬಹುಪರಿಶ್ರಮೈಃ ತೃಣಪಲ್ಲೀಗ್ರಾಮಾಭಿಜನೈಃ ಚಕ್ರವರ್ತಿ ಗೋಪಾಲಕೃಷ್ಣಾರ್ಯ ಮಹಾಶಯೈರಧಿಗತಭಾಷಾದ್ವಯನೈಪುಣ್ಯೈರೇನಾಂ ರಸಾಸ್ವಾದಸೀಮಾವಲಂಬಮಾನೈಃ ಪ್ರಣೀತಮಿದಂ ಕರ್ಣಾಟಭಾಷಾಮಯಂ ವಿವರಣಂ ತತ್ರತತ್ರಸವಿಶೇಷಸಂಸೂಚನಂ ಪರಿಶೀಲಿತವತೋ ಮಮ ಮಾನಸಮಾನಂದಸ್ಯಪರಾಂ ಕೋಟಿಮುಪಢೌಕತೇ ।

ಉತ್ಸಹತೇಚಸಪ್ರಮೋದಮೇತನ್ನಿಗದಿತುಂ, ವಿವರಣೇಽಸ್ಮಿನ್ ಕರ್ಣಾಟಭಾಷಾ ಮಯೇ ತತ್ತಚ್ಛ್ಲೋಕಾನ್ವಯ ಕ್ರಮಾನುರೋಧಿಸಾಮಾನ್ಯವಿವರಣಪ್ರಕಾಶನಪುರಸ್ಸರಂ ಝಟಿತಿಸುಬೋಧಮಾಕಲಯಂತ್ಯಾ ನೂತನಪರಿಷ್ಕರಣಮನುರುಂಧಾನಯಾ ಲಲಿತ ಲಲಿತಯಾ ತತ್ರತತ್ರತಾತ್ಪರ್ಯವಿವರಣಶೈಲ್ಯಾ ಭಾವೋಲ್ಲೇಖಾದಿಪ್ರಕಾಶನದರ್ಶನೇ ನಾಪರಿಚಿತಕರ್ಣಾಟಭಾಷಾಮಾತ್ರಾಣಾಮಪ್ಯೇತತ್ಕಾವ್ಯರತ್ನನಿಗೂಢರಸಭಾವಾದಿಕಂ ಪ್ರತ್ಯಕ್ಷಪರಿಕಲಿತಮಿವಪರಿಸ್ಫುರತೀತ್ಯೇತತ್ಪರಿಶೀಲಯಿತ್ರೂಣಾಮಪಾಣಿಪಿಹಿತಮಿತಿ ।

ತದಲಮತ್ರಬಹುನಾಪ್ರಪಂಚಿತೇನ ಇದಂಪರಮಿಹಾವಶಿಷ್ಯತೇ ಪ್ರಾಪ್ತಕಾಲಮಾ ವೇದಯಿತುಂ, ಯದೇತೇಽನ್ಯೇಽಪ್ಯುಭಯಭಾಷಾವಿಚಕ್ಷಣಾಃ ಗೀರ್ವಾಣವಾಣೀಮಯ ಕಾವ್ಯರತ್ನನಿಗೂಢರಸಭಾವಾದ್ಯಾವಿಷ್ಕರಣೈಕತಾನಮಾನಸಾ ವಿವರಣಮೇತತ್ಕರ್ಣಾಟ ಭಾಷಾಮಯಂ ಮಾತೃಕಾಮಾಕಲಯಂತೋ ಗೀರ್ವಾಣವಾಣೀಪರಿಲಸತಾಮನ್ಯೇಷಾ ಮಪಿಚಿರಂತನಾನಾಂ ಕಾವ್ಯರತ್ನಾನಾಂ ಸಮುಚಿತೈತಾದೃಶಕರ್ಣಾಟಭಾಷಾಮಯವಿವರಣ ಪ್ರಣಯನೇನ ಗೀರ್ವಾಣವಾಣೀವೈದೇಶಿಕಾನಪ್ಯುಪಕುರ್ಯುರಿತಿ ॥

“ ಇತಿಮಹಿಶೂರರಾಜಕೀಯ ಪ್ರಾಕ್ತನಕೋಶಾಲಯಸ್ಥ ವಿಬುಧೋಽಯಂ ।
ಶ್ರೀವಾಸಗೋಪಶರ್ಮಾನೈಜಂಭಾವಂ ಪ್ರಕಾಶಯತ್ಯಸ್ಮಿನ್ ॥ ”

ಸಹೃದಯಪರತಂತ್ರಃ

(*Sd*) **ತಿರು-ತಿರು. ಶ್ರೀನಿವಾಸಗೋಪಾಲಾಚಾರ್ಯಃ,**

ಶ್ರೀಮನ್ಮಹೀಶೂರ ಮಹಾರಾಜಸ್ಥಾನ ವಿದ್ವಾನ್.
ಶ್ರೀಮನ್ಮಹೀಶೂರರಾಜಕೀಯ ಪ್ರಾಕ್ತನಕೋಶಾಲಯ ಪಂಡಿತಶ್ಚ.

ಮೈಸೂರು,
10—6—1938.

:

॥ ಶ್ರೀಃ ॥

ಪ್ರಜ್ಞಾವ್ಯುತ್ಪತ್ತಿಪಾಕಸ್ಮೃತಿಕವಿಭವೋಲ್ಲಾಸಿಶಕ್ತಿಪ್ರಕರ್ಷಃ
ವೇದಾನ್ತಾಚಾರ್ಯವರ್ಯಃ ಕವಿಕಥಕಹರಿಃ ಸರ್ವತನ್ತ್ರಸ್ವತನ್ತ್ರಃ ।
ವೈದೇಹೀಪ್ರಾಣಕಾನ್ತಪ್ರಣಯರಸಘನಂ ಹಂಸಸಂದೇಶರೂಪಂ
ಕಾವ್ಯಂ ಶ್ರಾವ್ಯಂ ಸಹೃದಯಹೃದಯೈರ್ಮಾನನೀಯಂ ವ್ಯತಾನೀತ್ ॥೧॥

ಪುರಂ ರಾಷ್ಟ್ರಂ ಗ್ರಾಮೋ ಗಹನಖನಿವಾಪೀವರನದೀಃ
ಯಥಾತತ್ತ್ವದ್ವೃತ್ತಂ ವಿವಿಧಜನತಾಸಂಪದಪಿ ಯಾ ।
ಮತಿಃ ಶಿಲ್ಪಂ ದೇಶೋಽನ್ವಯ ಇತ್ಯತ್ರ ಗದಿತಾಃ
ಉದಾರೈರ್ವಾಙ್ಮುಕ್ತಾಮಣಿಗಣಕೃತೈರರ್ಥಘಟನೈಃ ॥೨॥

ಕವಿಬುಧವರೇಣ್ಯಶಿಕ್ಷಾಸುಗ್ರಹಭಾವಾರ್ಥದಿಙ್ಮುಖೇ ಕಾವ್ಯೇ ।
ಅಸ್ಮಿನ್ನಸಂಸ್ಕೃತವಿದಾಂ ದ್ರಾಕ್ಷಾಜಮ್ಬುಕನಯಶ್ಚಿರಾದಾಸೀತ್ ॥೩॥

ಅನಭಿಜ್ಞೈರ್ದ್ರವವಾದಪ್ರಶಾನ್ತಯೇಽಭಾವಿ ಸದ್ರಸಾಸ್ವಾದೈಃ ।
ನ ಚ ತಾವತಾಽಪಿ ಪ್ರೀತಿಂ ಭಾಷಾಮಧಿಜಗ್ಮುಷಾಂ ರಸಾಸ್ವಾದಃ ॥೪॥

ವೈದೇಶಿಕವಾಗ್ಗುಮ್ಫೈರ್ಹೃತಹೃದಯಾ ಯೇ ನ ಸಂಸ್ಕೃತಾಭಿಜ್ಞಾಃ ।
ತ ಇಮೇಽಪ್ಯುಪಕರಣೀಯಾ ದೇಶಿಕವಾಚಾಂ ರಸಂ ಸ್ವದನ್ತಾಂ ಚ ॥೫॥

ಇತಿ ಪರಿಕಲಯನ್ ಶ್ರೀಮಾನ್ ತಿರುಮಲೈನಲ್ಲಾರ್ಯಚಕ್ರವರ್ತಿಬುಧಃ ।
ಗೋಪಾಲಕೃಷ್ಣವರ್ಯೋ ಗುರುವರಕಾವ್ಯಸ್ಯ ಹಂಸದೂತಸ್ಯ ॥೬॥

ಹಿತಮಿತಸರಸಸುಪುಷ್ಕಲಶೈಲ್ಯಾ ಕರ್ಣಾಟಭಾಷಯಾ ನೂತ್ನಮ್ ।
ಅನುವಾದಮಿಮಮಸಂಸ್ಕೃತವಿದಾಮುಪಕಾರಾಯ ಪ್ರವರ್ತಯತ್ಯಧುನಾ ॥೭॥

ಏವಂ ಗುರುವರರಚಿತೇ ಕಾವ್ಯೇ ಭಾಷಾನಿಬನ್ಧನೈರ್ವಿಬುಧಾಃ ।
ಅವತಾರಯನ್ತು ರಸಿಕಾನ್ ಯೇನ ಭವೇದ್ಧಿ ಸಂಸ್ಕೃತೇ ಪರಾ ಪ್ರೀತಿಃ ॥೮॥

ಇತಿ ತು ಮಹೀಸುರನಗರೀಪ್ರಾಚ್ಯಗ್ರನ್ಥಾಲಯಪ್ರಧಾನಬುಧಃ ।
ಶ್ರೀರಾಮಮಿಶ್ರವಂಶ್ಯೋ ನರಸಿಂಹಃ ಸ್ವಾಶಯಂ ನಿವೇದಯತಿ ॥೯॥

೨೫–೭–೩೮.

**ಸೋ. ನರಸಿಂಹಾಚಾರ್ಯಃ,**
ಆಸ್ಥಾನ ವಿದ್ವಾನ್, ಮೈಸೂರು.

॥ ಶ್ರೀಃ ॥

ಮೈಸೂರು ಮರಿಮಲ್ಲಪ್ಪನವರ ಹೈಸ್ಕೂಲ್ ಪಂಡಿತ ಶ್ರೀ॥ ಉ॥ H. ಗೋಪಾಲಕೃಷ್ಣಮಾಚಾರ್ಯರನ್ನು ನಾನು ಚೆನ್ನಾಗಿ ಬಲ್ಲೆನು ಇವರು ಹುಲ್ಲಹಳ್ಳಿ ಚಕ್ರವರ್ತಿಗಳ ವಂಶೀಯರು. ರಾಜಮಾನ್ಯ ರಾಜಶ್ರೀ ಸ॥ ಗೋಪಾಲ ರಾಜೇ ಅರಸಿನವರ ಮನೆ ಗುರುಗಳಾದ ಪಂಡಿತ ರಂಗನಾಥ ಚಕ್ರವರ್ತಿಗಳ ಮಕ್ಕಳು. ಇವರ ತಂದೆಯವರು ಇವರ ಬಾಲ್ಯದಲ್ಲೇ ವಿಧಿವಶರಾದರು ಆದರೂ ವಂಶಾನುಗುಣವಾದ ಪಾಂಡಿತ್ಯಗೌರವಗಳನ್ನು ಸಂಪಾದಿಸುವುದರಲ್ಲಿ ಪರಿಶ್ರಮ ಪಟ್ಟು ಗುರಿಯನ್ನು ಸಾಧಿಸಿ ಶಿಷ್ಟರಾದ ವಿದ್ವಾಂಸರ ಶ್ಲಾಘನೆಗೆ ಪಾತ್ರರಾಗಿರುವುದರಿಂದ ಇವರು ಶ್ರೇಯೋದರ್ಕಪರರಾಗುವುದರಲ್ಲಿ ನಂಬಿಕೆಯಿದೆ. ಲಕ್ಷ್ಮೀಶಮಹಾಕವಿಯ ಮತನಿರ್ಣಯ ವಿಷಯದಲ್ಲಿ ಇವರು ಮಾಡಿರುವ ವಿಮರ್ಶೆಯೊಂದನ್ನು ನೋಡಿದರೆ ಇವರ ಪಾಂಡಿತ್ಯದ ಬಲವು ವ್ಯಕ್ತಗೊಳ್ಳುವುದೆಂದು ಹೇಳಬಲ್ಲೆನು.

ಪ್ರಕೃತದಲ್ಲಿ ಶ್ರೀಮನ್ನಿಗಮಾಂತ ಮಹಾದೇಶಿಕರಿಂದ ರಚಿತವಾದ ಹಂಸಸಂದೇಶವೆಂಬ ಗ್ರಂಥವನ್ನು ಸರ್ವರೂ ವ್ಯವಹರಿಸುವ ಕನ್ನಡನುಡಿಯಲ್ಲಿ ಪರಿವರ್ತಿಸಿರುವರು. ಮೂಲಗ್ರಂಥಕ್ಕೆ ಶ್ರೀಮದಪ್ಪಯ್ಯದೀಕ್ಷಿತರೂ, ಶ್ರೀಮತ್ ಪರಮಹಂಸೇತ್ಯಾದಿ ಬಿರುದಾಂಕಿತರಾದ ಶ್ರೀಕೃಷ್ಣಬ್ರಹ್ಮತಂತ್ರ ಯೋಗೀಂದ್ರರೇ ಮೊದಲಾದವರು ಮಾಡಿರುವ ವ್ಯಾಖ್ಯಾನಗಳ ವಿಶೇಷಭಾವಗಳನ್ನೂ ಈ ನಮ್ಮ ಪಂಡಿತರು ತಮ್ಮ ವಚನಪರಿವರ್ತನೆಯಲ್ಲಿ ಗರ್ಭೀಕರಿಸಿರುವ ರೀತಿಯು ಮಾನ್ಯಾಸ್ಪದವಾಗಿರುತ್ತದೆ. ಆಧುನಿಕ ನವನಾಗರಿಕರು ನವನವವೆಂದು ಸಾರುವ ಭಾವವಿಶೇಷಗಳಷ್ಟೂ ಪ್ರಾಚೀನಕಾಲದಲ್ಲೇ ಬೆಳಗುತ್ತಿದ್ದು ಇತೋಽಪ್ಯತಿಶಯವಾಗಿತ್ತೆಂದು ಸಿದ್ಧಾಂತಗೊಳಿಸುವ ಸಂಸ್ಕೃತ ಪ್ರಾಚೀನ ಗ್ರಂಥಗಳು ಸರ್ವಸುಲಭವಾಗಲೆಂದೂ, ಆಕಾಲದ ನಾಗರಿಕತೆ ವ್ಯವಹಾರ ಕೌಶಲ್ಯಾದಿಗಳು ಜ್ಞಾತವಾಗಿ ತತ್ಫಲಲಾಭವು ಸಾರ್ವಜನಿಕವಾಗಲೆಂದೂ ಇವರು ವಿಶಾಲದೃಷ್ಟಿಯಿಂದ ಮಾಡಿರುವ ಈ ಸತ್ಕಾರ್ಯವು ಇತರಪಂಡಿತರ ಆದರಕ್ಕೂ ಅನುಕರಣೆಗೂ ಪಾತ್ರವಾದುದೆಂದು ಉದ್ಬಾಹುವಾಗಿ ಹೇಳುತ್ತೇನೆ. ಇಂತಹ ಪಂಡಿತರಿಗೂ ಇವರ ಗ್ರಂಥಕ್ಕೂ ಅಧಿಕಾರಿವರ್ಗದಿಂದ ತಕ್ಕ ಪುರಸ್ಕಾರ ದೊರೆತು ಸರ್ವಶ್ರೇಯಸ್ಸೂ ಉಂಟಾಗಲೆಂದೂ ಭಗವಂತನಲ್ಲಿ ಪ್ರಾರ್ಥಿಸುವೆನು.

(*Sd.*) **ಟಿ. ಶ್ರೀನಿವಾಸರಂಗಾಚಾರ್ಯ,**

ಸೀನಿಯರ್ ಕನ್ನಡ ಪಂಡಿತ್, ಆಸ್ಥಾನ ವಿದ್ವಾನ್,

ತಾ॥ 24—6—38. ಗೌರ್ನಮೆಂಟ್ ಟ್ರೈನಿಂಗ್ ಕಾಲೇಜ್, ಮೈಸೂರು.

Palace Vidwan, Nyayatheertha,
*A. Shanthiraja Shastry,*
Editor
"Vivekabhyudaya."

**Shantinilaya,**
*MYSORE,*
23--6--1938.

ಮೈಸೂರು ಮರಿಮಲ್ಲಪ್ಪ ಹೈಸ್ಕೂಲ್ ಕನ್ನಡಪಂಡಿತರಾದ ಶ್ರೀಮಾನ್ ಹೆಚ್. ಗೋಪಾಲಕೃಷ್ಣಮಾಚಾರ್ಯರವರ ಸಮಕ್ಷದಲ್ಲಿ ವಿಜ್ಞಾಪನೆಗಳು,

ತಾವು ಬರೆದಿರುವ "ಕರ್ನಾಟಕ ಹಂಸಸಂದೇಶ" ವೆಂಬ ಗ್ರಂಥವನ್ನು ನೋಡಲು ನನಗೆ ಕೊಟ್ಟಿರುವುದಕ್ಕಾಗಿ ತಮಗೆ ನಾನು ಕೃತಜ್ಞನಾಗಿದ್ದೇನೆ. ಆಂಗ್ಲ ಕವಿಗಳಲ್ಲಿ ಷೇಕ್ಸ್‌ಪಿಯರಿನಂತೆ ನಮ್ಮ ಭಾರತೀಯ ಕವಿಗಳಲ್ಲಿ ಸುಪ್ರಸಿದ್ಧನಾಗಿರುವವನು ಕಾಳಿದಾಸ ಮಹಾಕವಿ. ಅವನ ಅಸದೃಶವಾದ ಕಲ್ಪನಾಶಕ್ತಿಯನ್ನೂ ಪ್ರತಿಭೆಯನ್ನೂ ನಾವು ಮೇಘಸಂದೇಶದಲ್ಲಿ ನೋಡುತ್ತಿದ್ದೇವೆ. ಅಂತಹ ಕಾವ್ಯವು ಮತ್ತೊಂದಿಲ್ಲವೆನ್ನುವುದಕ್ಕೆ ಅಪವಾದರೂಪವಾಗಿ ವೇದಾಂತಾಚಾರ್ಯರ, ಕವಿತಾರ್ಕಿಕಸಿಂಹ ವೆಂಕಟನಾಥ ಮಹಾಕವಿಗಳು "ಹಂಸಸಂದೇಶ" ವೆಂಬ ಸಂಸ್ಕೃತಕಾವ್ಯವನ್ನು ರಚಿಸಿದ್ದಾರೆ. ಇದು ಮೇಘಸಂದೇಶಕ್ಕಿಂತ ಸ್ವಲ್ಪ ಪ್ರೌಢವಾದ ಕವಿತೆಯೆಂದು ಹೇಳಬಹುದು. ಸಾಮಾನ್ಯವಾಗಿ ಕವಿಗಳು ಲೋಕೋಪಕಾರಾರ್ಥವಾಗಿ ಕಾವ್ಯದ ನೆವದಿಂದ ಅನೇಕ ಹಿತೋಕ್ತಿಗಳನ್ನು ಬುದ್ಧಿವಾದಗಳನ್ನು ಲೋಕಕ್ಕೆ ಬೋಧಿಸಿರುತ್ತಾರಾದರೂ ಅಂತಹ ಅನೇಕ ಕಾವ್ಯಗಳು ಸಂಸ್ಕೃತದಲ್ಲಿರುವುದರಿಂದ ಅವರ ಪರಿಶ್ರಮದ ಫಲವನ್ನು ಸಂಸ್ಕೃತಭಾಷಾನಭಿಜ್ಞರು ಅನುಭವಿಸಲಾಗುವುದಿಲ್ಲ. ಎಂದರೆ ಆ ಕವಿಗಳ ಉದ್ದೇಶವಷ್ಟು ದೂರ ಅದು ಸಫಲವಾಗುತ್ತಿಲ್ಲ. ಕನ್ನಡವು ಕನ್ನಡಿಗರಿಗೆ ತಾಯಿನುಡಿಯಾಗಿರುವುದಾದರೂ ಇದರಲ್ಲಿ ಪದ್ಯರೂಪವಾದ ಪ್ರೌಢಕಾವ್ಯವನ್ನು ರಚಿಸಿದರೆ ಅದು ಬಹುಜನೋಪಕಾರಿಯಾಗಲಾರದೆಂದು ಬಗೆದು ತಾವು ಪ್ರೌಢಕಾವ್ಯಗಳ ರಸಭಾವಗಳನ್ನು ಭಾಷಾಂತರಕ್ಕಿಳಿಸುವುದು ಕಷ್ಟಸಾಧ್ಯವಾದರೂ ಶ್ರಮವಹಿಸಿ ಆ ಹಂಸಸಂದೇಶದ ಭಾವವನ್ನೆಲ್ಲಾ ಯಥಾವತ್ತಾಗಿ ಗದ್ಯರೂಪವಾದ ಈ ತಮ್ಮ "ಕರ್ನಾಟಕ ಹಂಸಸಂದೇಶ" ಗ್ರಂಥದಲ್ಲಿ ಇಳಿಸಿರುವುದು ಸ್ತುತ್ಯವಾಗಿದೆ. ತಮ್ಮ ಈ ಕಾವ್ಯದಲ್ಲಿಯ ಪದಲಾಲಿತ್ಯವೂ ಸರಣಿಯೂ ವಾಚಕನನ್ನು ವಾಚನಾಮಾರ್ಗದಲ್ಲಿ ಅನಾಯಾಸವಾಗಿ ನಡೆಯಿಸುತ್ತವೆ. ಈ ಕಾವ್ಯವು ಕನ್ನಡಿಗರ ಪ್ರೋತ್ಸಾಹವನ್ನು ಆಕರ್ಷಿಸುವಷ್ಟು ಚೆನ್ನಾಗಿರುವುದರಿಂದ ಬೇರೆಯವರ ಪ್ರೇರಣೆಯ ಆವಶ್ಯಕತೆಯು ಇಲ್ಲವೆಂಬುದೂ ನನ್ನ ಮನಃಪೂರ್ವಕವಾದ ಅಭಿಪ್ರಾಯವು.

(*Sd.*) **A. Shanthiraja Shastry.**

ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯರನ್ನು ನಾನು ಬಹಳದಿನಗಳಿಂದ ಬಲ್ಲೆನು. ಇವರು ನಾನು ಟ್ರೈನಿಂಗ್ ಕಾಲೇಜಿನಲ್ಲಿದ್ದ ಕಾಲದಲ್ಲಿ ನನ್ನಲ್ಲಿ ವ್ಯಾಸಂಗಮಾಡುತ್ತಲಿದ್ದರು. ವಿಧೇಯತ್ವಾದಿ ಸದ್ಗುಣಗಳೆಲ್ಲಾ ಇವರಲ್ಲಿ ಚೆನ್ನಾಗಿವೆ. ಇವರು ಕನ್ನಡಿಸಿರುವ "ಹಂಸಸಂದೇಶ" ವನ್ನು ಕೆಲವುಕಡೆ ನಾನು ನೋಡಿದ್ದೇನೆ. ಅವುಗಳೆಲ್ಲಾ ಮೂಲದ ತಾತ್ಪರ್ಯವನ್ನು ಸ್ಪಷ್ಟವಾಗಿ ವ್ಯಕ್ತಪಡಿಸುತ್ತವೆ...............ನಾನು ನೋಡಿದ ಭಾಗಗಳು ಸಮರ್ಪಕವಾಗಿರುವುದರಿಂದ ಮಿಕ್ಕಭಾಗವೂ "ಸ್ಥಾಲೀಪುಲಾಕನ್ಯಾಯ" ದಿಂದ ಹಾಗೆಯೇ ಇರುವುದೆಂದು ನಾನು ದೃಢವಾಗಿ ಹೇಳಬಲ್ಲೆನು. ಕನ್ನಡಿಗರು ಇವರಿಗೆ ಎಲ್ಲಾವಿಧವಾದ ಪ್ರೋತ್ಸಾಹವನ್ನೂ ನೀಡುವರೆಂದು ಕೋರುತ್ತೇನೆ.

(*Sd.*) **ಬಿ. ವೆಂಕಟರಾಮಶಾಸ್ತ್ರೀ,**
ಅಸ್ಥಾನಮಹಾವಿದ್ವಾನ್, ಸಾಹಿತ್ಯರತ್ನವುನ್, ವಿದ್ವನ್ಮಣಿ,
ರಿಟೈರ್ಡ್ ಸಂಸ್ಕೃತ ಸೀನಿಯರ್ ಪಂಡಿತರು,
ಟ್ರೈನಿಂಗ್ ಕಾಲೇಜ್, ಮೈಸೂರು.

11—9—38.

ವೇದಾಂತಾಚಾರ್ಯರೆಂದು ವಿಖ್ಯಾತರಾದ ವೆಂಕಟನಾಥ ಕವಿವರ್ಯರಿಂದ ರಚಿತವಾಗಿರುವ " ಹಂಸಸಂದೇಶ" ವೆಂಬ ಗ್ರಂಥಕ್ಕೆ ವೇ|| ಗೋಪಾಲಕೃಷ್ಣಮಾಚಾರ್ಯರು ಬರೆದಿರುವ ಕನ್ನಡ ವ್ಯಾಖ್ಯಾನವು ಯಥೋಚಿತವಾಗಿ ಅವಲೋಕಿಸಲ್ಪಟ್ಟಿದೆ. ಒಂದು ಭಾಷೆಯಲ್ಲಿರುವ ಗ್ರಂಥವನ್ನು ಇನ್ನೊಂದುಭಾಷೆಗೆ ಪರಿವರ್ತಿಸುವುದು ಉಭಯಭಾಷಾಪಾಂಡಿತ್ಯಕ್ಕೆ ಸಾಕ್ಷಿಯಾಗಿದೆ. ಸಾಮಾನ್ಯವಾಗಿ ಜಡವಸ್ತುಗಳನ್ನು ಜೀವವಸ್ತುಗಳಿಗೆ ಹೋಲಿಸಿ ವ್ಯವಹರಿಸುವುದು, "ಸರ್ವಂ ಖಲ್ವಿದಂ ಬ್ರಹ್ಮ" ಎಂಬ ವಾಕ್ಯದ ಗಂಭೀರಾರ್ಥವನ್ನು ಸ್ಪಷ್ಟೀಕರಿಸುವುದಕ್ಕೆ ಪ್ರೇರಿಸತಕ್ಕುದಾಗಿದೆ. ಈ ನಮ್ಮ ವ್ಯಾಖ್ಯಾಕಾರರೂ ಈರೀತಿಯಾಗಿ ಇನ್ನೂ ಹೆಚ್ಚು ಪ್ರಜೋಪಕಾರವನ್ನು ಮಾಡುವರಾಗಲೆಂದು ಕೋರುತ್ತೇನೆ.

ಮೈಸೂರು,
೨೫—೯—೩೮.

(*Sd.*) ವೇದ, ನ್ಯಾಯಮಾಚಾರ್ಯ ಮೃತ್ಯುಂಜಯ,
**ತ್ರ್ಯಂಬಕ ಸಿದ್ಧಲಿಂಗ ಒಡೆಯರ್,**
ಆಸ್ಥಾನ ವಿದ್ವಾನ್.

ಹಂಸಸಂದೇಶ ಕಾವ್ಯವು ಸಂಸ್ಕೃತಭಾಷೆಯಲ್ಲಿ ರಚಿತವಾಗಿರುವುದರಿಂದ ಅಲ್ಲಿರತಕ್ಕ ಭಾವಗಳನ್ನು ತಿಳಿಯಲು ಸಂಸ್ಕೃತಭಾಷಾಭಿಜ್ಞರೇ ಅರ್ಹರಾಗುತ್ತಾರೆ. ಇದರಿಂದ ಈ ಗ್ರಂಥವು ಸ್ವಲ್ಪ ಜನಗಳುಮಾತ್ರ ತಿಳಿಯುವಂತಾಗುವುದು. ಇದನ್ನು ಹೆಚ್ಚು ಪ್ರಚಾರ ಮಾಡಿ ಕನ್ನಡಭಾಷೆ ಬಲ್ಲವರಿಗೂ ಈ ಆನಂದವನ್ನು ಅನುಭವಿಸುವಂತೆ ಮಾಡುವುದಕ್ಕೆ ಪ್ರಯತ್ನಪಟ್ಟಿರುವ ಮರಿಮಲ್ಲಪ್ಪಾ ಹೈಸ್ಕೂಲ್ ಅಧ್ಯಾಪಕರಾದ ಪಂಡಿತ ಶ್ರೀ॥ ಹೆಚ್. ಗೋಪಾಲಕೃಷ್ಣಮಾಚಾರ್ಯರು ಲಲಿತಪದಗಳುಳ್ಳ ಕನ್ನಡಭಾಷೆಯ ವಾಕ್ಯಶೈಲಿಯಿಂದ ಪರಿವರ್ತಿಸಿ ಮಹೋಪಕಾರವನ್ನು ಮಾಡಿರುತ್ತಾರೆಂಬುದು ಕನ್ನಡಭಾಷಾಭಿಮಾನಿಗಳಿಗೆ ಸಂತೋಷಪಡತಕ್ಕ ಸನ್ನಿವೇಶವಾಗಿದೆ.

ಈ ಕರ್ಣಾಟಕ ಹಂಸಸಂದೇಶವು ಎಲ್ಲ ಭಾಗಗಳಲ್ಲೂ ಮೂಲವಾದ ಸಂಸ್ಕೃತ ಹಂಸಸಂದೇಶದ ಭಾವಗಳನ್ನು ಭಾಷೆಯಲ್ಲಿ ಪ್ರಕಟಪಡಿಸಲು ಸಮರ್ಥವಾಗಿದೆ. ಅಲ್ಲದೆ ಕನ್ನಡಭಾಷೆಯನ್ನು ಕಲಿಯಬೇಕೆನ್ನುವವರಿಂದಲೂ, ಪಂಡಿತರಿಂದಲೂ ಎಲ್ಲ ಭಾಗಗಳಲ್ಲೂ ಆದರಿಸಲ್ಪಡುತ್ತದೆಯೆಂದು ನಂಬುವ,

(*Sd.*) **ವೆಂಕಟಾಚಾರ್ಯಃ,**
ಸಂಕೀರ್ಘಟ್ಟಾಭಿಜನಃ ಸಾಹಿತ್ಯಪ್ರಧಾನೋಪಾಧ್ಯಾಯಃ,
ಮಹಾರಾಜ ಸಂಸ್ಕೃತ ಮಹಾಪಾಠಶಾಲಾ,
ಮೈಸೂರು.

20—6—38.

Office of the Rajaguru
**His Holiness,**
**Sree Bramhatantra**
**Parakala Swamy Mutt,**

**MYSORE,**
Date, 1 November 1938.

॥ ಶ್ರೀ ಬ್ರಹ್ಮತಂತ್ರ ಪರಕಾಲ ಶ್ರೀಮಠ ॥

ಶ್ರೀ ಹಯಗ್ರೀವ ಲಕ್ಷ್ಮೀನಾರಾಯಣ ಶ್ರೀ.

ವಿಶಿಷ್ಟಾದ್ವೈತಸಿದ್ಧಾಂತಕ್ಕೆ ಮಹಾಪರಮೋಪಕಾರಿಗಳಾಗಿ ಸರ್ವತಂತ್ರ ಸ್ವತಂತ್ರರೆನಿಸಿದ ಶ್ರೀವೇದಾಂತಾಚಾರ್ಯರು ವಿರಚಿಸಿದ ಹಂಸಸಂದೇಶವೆಂಬ ಸಂಸ್ಕೃತಕಾವ್ಯಕ್ಕೆ ಮರಿಮಲ್ಲಪ್ಪನವರ ಹೈಸ್ಕೂಲ್ ಪಂಡಿತರು ಹೆಚ್. ಗೋಪಾಲಕೃಷ್ಣಮಾಚಾರ್ಯರು ಕನ್ನಡವಚನರೂಪವಾಗಿ ಪರಿವರ್ತನಮಾಡಿ ಸಂಸ್ಕೃತ, ಕನ್ನಡ ಈ ಎರಡುಭಾಗಗಳನ್ನೂ ಸೇರಿಸಿ ಅಚ್ಚುಹಾಕಿಸಿ ಶ್ರೀಸ್ವಾಮಿಗಳವರ ಮಹಾಸನ್ನಿಧಾನದಲ್ಲಿ ಅರಿಕೆಮಾಡಿದರು. ಇದನ್ನು ಲಾಲಿಸಿ ಶ್ರೀ ಸ್ವಾಮಿಗಳವರು—"ಶ್ರೀ ವೇದಾಂತದೇಶಿಕರವರ ಸೂಕ್ತಿಗಳನ್ನು ಜನಗಳಲ್ಲಿ ಪ್ರಚಾರಪಡಿಸುವುದು ಬಹಳ ಉತ್ತಮಕಾರ್ಯವು. ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯರು ಮಾಡಿರುವ ಈ ಪರಿವರ್ತನವನ್ನು ಕನ್ನಡಿಗರೆಲ್ಲರೂ ಓದಿ ಆನಂದಪಡಬಹುದು. ಇವರ ಭಾಷೆಯು ಲಲಿತವಾಗಿಯೂ, ಸುಬೋಧವಾಗಿಯೂ ಇರುವುದು. ಇದು ಕನ್ನಡಕ್ಕೆ ಒಂದುವಿಧವಾದ ಉಪಕಾರವೆನಿಸುವುದು" ಎಂದು ಅಪ್ಪಣೆ ಕೊಡಿಸಿರುತ್ತಾರೆ.

**ತಿರುವಳ್ಳೂರ್ ಶ್ರೀನಿವಾಸರಾಘವಾಚಾರ್,**
*Hon. Superintendent*
*&*
*Palace Dharmadikari.*

No. 296

ಶ್ರೀ ಯೋಗಶಾಲಾ,
ಪ್ಯಾಲೇಸ್, ಮೈಸೂರು.

॥ ಶ್ರೀಃ ॥

"ಕನ್ನಡನುಡಿಯು (ಭಾಷೆಯು) ದರ್ಶನಕ್ಕೆ (ಕನ್ನಡಿಗೆ) ಸಮಾನವಾದುದು." "ಹಂಸಸಂದೇಶ" ವೆಂಬ ಕಾವ್ಯದ ಕರ್ತರು ನಿಖಿಲದರ್ಶನಶಾಸ್ತ್ರಜ್ಞರು. (ಸರ್ವತತ್ವ ಶಾಸ್ತ್ರಜ್ಞರು) ಆ ಕಾವ್ಯವನ್ನು ರಚಿಸಿದ ಮಹಾಶಯರಿಗೆ—

"ಕವಿತಾರ್ಕಿಕಸಿಂಹ, ಸರ್ವತಂತ್ರಸ್ವತಂತ್ರೋಭಯವೇದಾಂತಾಚಾರ್ಯ" ರೆಂಬೀ ಮೊದಲಾದ ಬಿರುದಾವಳೀಪಟ್ಟವು ಸುಮಾರು 630 ವರುಷಗಳ ಹಿಂದೆಯೇ ಬಂದಿದೆ ಯೆಂಬೀ ಸಂಗತಿಯು ಲೋಕವಿಖ್ಯಾತವಾಗಿದೆ. ಈ ಕವಿತಾರ್ಕಿಕಸಿಂಹರಿಂದ ರಚಿಸಲ್ಪಟ್ಟ ಕಾವ್ಯ ಶಾಸ್ತ್ರಗ್ರಂಥಗಳು ನೂರಾರುಂಟು. ಅವುಗಳಲ್ಲಿ "ಹಂಸಸಂದೇಶ" ವೆಂಬೀ ಕಾವ್ಯ ಒಂದಾಗಿದೆ.

ಇದು ಸಾಮಾನ್ಯವಾಗಿ ನೋಡುವ ಓದುಗರಿಗೆ "ಕಾರುಣ್ಯ" ರಸವನ್ನು ಉಕ್ಕಿಸುತ್ತಾ ಪ್ರಿಯಾ, ಪ್ರಿಯರ (ಕಾಮಿನೀ ಕಾಮುಕರ) ನಿಷ್ಕಾರಣ (ಅನಿರೀಕ್ಷಿತ) ವಿಯೋಗದಿಂದಾಗುವ ಚಿತ್ತವೃತ್ತಿಯ ವೈಚಿತ್ರ್ಯವನ್ನು ತೋರ್ಪಡಿಸುತ್ತವೆಯಾದರೂ ಅಷ್ಟುಮಾತ್ರವೇ ಈ ಕಾವ್ಯಕರ್ತರ ಆಶಯವೆಂದು ಆಶಯಜ್ಞರು ತಿಳಿಯಲಾರರು.

ಈ ಕಾವ್ಯದಲ್ಲಿರುವ ಪ್ರತಿಯೊಂದು ಶ್ಲೋಕವೂ ಷಡ್ದರ್ಶನಗಳ ರಹಸ್ಯವನ್ನು ಹೊರಗೆಡಹುವಂತಹುದು. ಇಂತಹ ಅತ್ಯಂತ ಗಂಭೀರಾಶಯವುಳ್ಳ ಸಂಸ್ಕೃತಪದ್ಯಗಳನ್ನು ಸಮಗ್ರವಾಗಿ ಸರಳ, ಮೃದು, ಮಧುರವಾದ ಕನ್ನಡಭಾಷೆಯಲ್ಲಿ ಪರಿವರ್ತಿಸಿ ತಾತ್ಪರ್ಯವನ್ನು ರಚಿಸಿರುವ ಶ್ರೀ॥ ಉ॥ ವೇ॥ ಎಚ್. ಗೋಪಾಲಕೃಷ್ಣಮಾಚಾರ್ಯ ಕನ್ನಡಪಂಡಿತರು ಗೌರ್ನಮೆಂಟ್ ಮರಿಮಲ್ಲಪ್ಪ ಹೈಸ್ಕೂಲ್ ಇವರ ಪಾಂಡಿತ್ಯವು ಉಭಯಭಾಷಾವೈದುಷ್ಯವನ್ನು ವ್ಯಕ್ತಪಡಿಸುವುದು.

ಅಲ್ಲದೆ ಅಲ್ಲಲ್ಲಿರುವ ಕವಿಯ ಆಶಯಾನುಸಾರವಾದ ತತ್ವಸಂಗತಿಗಳನ್ನೂ ಸಂಗ್ರಹಿಸಿರುವುದು ಸ್ತೋತ್ರಾರ್ಹವಾಗಿದೆ.

ಇವರ ಈ ಕಾವ್ಯತಾತ್ಪರ್ಯಸಂಗ್ರಹವು ದರ್ಶನತತ್ವವನ್ನು ಹೊರಗೆಡವಿ ಲೋಕಕಲ್ಯಾಣಕಾರಕವಾಗಿ ಪ್ರತಿಯೊಬ್ಬರಮನವೂ ದಯಾಮಯವಾಗುವಂತೆ ಮಾಡುವುದರಲ್ಲಿ ಸಂಶಯವಿಲ್ಲ. ಇದನ್ನು ಪ್ರತಿಯೊಬ್ಬರೂ ಓದಬೇಕು. ಓದುವಲ್ಲಿ ಗೃಹಿಣೀ ಗೃಹಸ್ಥರು ಧರ್ಮಮರ್ಮಜ್ಞರಾಗಿ ಸುಖಿಸುವರೆಂದು ಹೇಳುವೆನು.

ಸ್ತ್ರೀಪುಂಭೇದವಿಲ್ಲದೆ ಎಲ್ಲರೂ ಇದನ್ನು ಓದಿ ತತ್ವಜ್ಞರಾಗಬಲ್ಲರು. ಇಂತಹ ತತ್ವಬೋಧಕಗ್ರಂಥಗಳಿಗೆ ಹೆಚ್ಚಾಗಿ ಪ್ರೋತ್ಸಾಹವನ್ನಿತ್ತು ಮಹಾಶಯರೆಲ್ಲರೂ ಕನ್ನಡ ವಾಙ್ಮಯಸೇವೆಯನ್ನು ತೇಜಸ್ವಿಯನ್ನಾಗಿ ಮಾಡುವುದು ಅವಶ್ಯಕ. ಇಂತಹ ಗಂಭೀರಕಾವ್ಯವನ್ನು ಕನ್ನಡಿಸಿದ ಮೇಲ್ಕಂಡ ಪಂಡಿತರಿಗೆ ಅನೇಕ ವಂದನೆಗಳನ್ನು ಅರ್ಪಿಸಿದೇನೆ.

ತಾ॥ 8—10—38
ಬಹುಧಾನ್ಯನಾಮಸಂವತ್ಸರ
ಆಶ್ವ. ಶುದ್ಧ
ತ್ರಯೋದಶೀ, ಶುಕ್ರವಾರ

ಇತಿ, ಒರ್ವ ಉದಾಸೀನ,

**ತಿರುಮಲ ಕೃಷ್ಣಮಾಚಾರ್ಯಃ,**

ಯೋಗ ಪ್ರೊಫೆಸರ್, ಪ್ಯಾಲೇಸ್, ಮೈಸೂರು.

**A. N. NARASIMHIA,** M.A., Ph.D. (Lond.)

**1100, Chamarajapuram,**
**Mysore.**

Dated 19-3-1939.

I have read with very great pleasure "ಕನ್ನಡ ಹಂಸಸಂದೇಶ" published by Pandit Gopalakrishnamachar of the Govt. Marimallappa's High School, Mysore. His Kannada Translation of Venkatesa's "ಹಂಸಸಂದೇಶ" is lucid, interesting and instructive, though scholarly. Translations of such masterpieces into Kannada will pave the way for the better appreciation of our own literature and culture by those that do not know sanskrit. I wish Pandit Gopalakrishnamachar every success and hope he will continue to do this kind of useful service to the people of Karnataka.

(*Sd.*) ***A. N. Narasimhia.***

ವೆಂಕಟೇಶ (ವೇದಾಂತದೇಶಿಕರು) ಮಹಾಕವಿಯು ಅನೇಕ ಮತಗ್ರಂಥಗಳನ್ನು ಬರೆದಿರುವುದಲ್ಲದೆ ಯಾದವಾಭ್ಯುದಯ ಮತ್ತು ಹಂಸಸಂದೇಶಗಳೆಂಬ ಉತ್ತಮ ಕಾವ್ಯಗಳನ್ನೂ ರಚಿಸಿರುವನು. ಹಂಸಸಂದೇಶಕ್ಕೆ ಶ್ರೀ ಶ್ರೀ ಕೃಷ್ಣಬ್ರಹ್ಮತಂತ್ರ ಪರಕಾಲಸ್ವಾಮಿಗಳು “ರಸಾಸ್ವಾದಿನಿ” ಯೆಂಬ ವ್ಯಾಖ್ಯಾನವನ್ನು ಬರೆದಿರುವರು. ಅಲ್ಲದೆ ಕೀರ್ತಿಶೇಷರಾದ ಪಂಡಿತರತ್ನಂ ಕಸ್ತೂರಿ ರಂಗಾಚಾರ್ಯರು “ರಸಾಸ್ವಾದಿನೀಪಾದುಕಾ” ಎಂಬ ಟೀಕೆಯನ್ನೂ ಬರೆದಿರುವರು. ಇವುಗಳಿಂದ ಹಂಸಸಂದೇಶ ಕಾವ್ಯಪ್ರಶಸ್ತಿಯು ಗೊತ್ತಾಗುವುದು.

ಹಂಸಸಂದೇಶವು ಸರಸಮಧುರಪದಗಳಿಂದೊಪ್ಪುತ್ತಾ ವಿಪ್ರಲಂಭಪರಿಪೋಷಕವಾದ ಮಂದಾಕ್ರಾಂತಾವೃತ್ತದಲ್ಲಿ ಬರೆದಿದೆ. ಕಾಳಿದಾಸನ ಮೇಘಸಂದೇಶದಲ್ಲಿ ಉತ್ತರದೇಶದ ವರ್ಣನೆಯಿದೆ. ಹಂಸಸಂದೇಶದಲ್ಲಿ ದಕ್ಷಿಣದೇಶದಲ್ಲಿ ಪ್ರಸಿದ್ಧವಾದ ಶ್ರೀರಂಗ, ಕಾಂಚೀ, ತಿರುಪತಿ, ಹಾಲಾಸ್ಯಕ್ಷೇತ್ರ, ಚೋಳದೇಶ, ತುಂಡೀರಮಂಡಲ, ವೆಂಕಟಾದ್ರಿ, ಕಾವೇರಿ, ತಾಮ್ರಪರ್ಣೀ ಇವುಗಳ ವರ್ಣನೆಯು ಚಮತ್ಕಾರವಾಗಿಯೂ ರಸವತ್ತಾಗಿಯೂ ಮಾಡಲ್ಪಟ್ಟಿದೆ.

ಈ ಸುಪ್ರಸಿದ್ಧವಾದ ಗ್ರಂಥವು ಕನ್ನಡಿಗರಿಗೆ ಸುಲಭವಾಗಿ ಅರ್ಥವಾಗಿ ಮನೋರಂಜನೆಯಾಗುವುದಕ್ಕೆ ಅನುಕೂಲವಾಗಿ ಶ್ರೀ ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯರು ಮೂಲಶ್ಲೋಕ ಟಿಪ್ಪಣಿಗಳೊಡನೆ ಕನ್ನಡದಲ್ಲಿ ಮುದ್ದಾಗಿ ಪ್ರಕಟಿಸಿರುವುದು ಶ್ಲಾಘನೀಯವಾಗಿದೆ.

ನಮ್ಮ ದೇಶದಲ್ಲಿ ಪಂಡಿತರು ಪುರಾಣ, ಸಾಹಿತ್ಯ, ವೈದ್ಯ, ಜ್ಯೋತಿಷ, ವೇದಾಂತ ಕಾವ್ಯಗ್ರಂಥಗಳಿಗೆ ಟೀಕಾತಾತ್ಪರ್ಯಗಳನ್ನು ದೇಶಭಾಷೆಗಳಲ್ಲಿ ಬರೆದು ಪ್ರಕಟನೆಮಾಡುವ ಕೆಲಸವನ್ನು ಹೆಚ್ಚುಹೆಚ್ಚಾಗಿ ಕೈಗೊಳ್ಳಬೇಕಾದ ಕಾಲವು ಒದಗಿದೆ. ಈ ಕೆಲಸವು ಸುಲಭವೂ ಅಲ್ಲ, ಸಾಮಾನ್ಯವೂ ಅಲ್ಲ, ಇದಕ್ಕೆ ಮಾನ್ಯತೆಯುಂಟು.

“ಅಳಲುಭಕ್ತಿ ಮಳಲುಸೇವೆ” ಎಂಬ ಹೇಳಿಕೆಯು ನಮ್ಮಲ್ಲಿ ವಾಡಿಕೆಯುಂಟು. ಅದೇರೀತಿಯಲ್ಲಿ ಸಾಹಿತ್ಯ ಪ್ರಪಂಚದಲ್ಲಿ ಸರಸ್ವತೀಸೇವೆಯನ್ನು ಪಂಡಿತರು ನಾನಾ ಪ್ರಕಾರವಾಗಿ ಸಲ್ಲಿಸುತ್ತಾರೆ. ಕೆಲವರು ಗ್ರಂಥಗಳನ್ನು ಬರೆಯುತ್ತಾರೆ. ಮತ್ತೆ ಕೆಲವರು ಮೂಲಗ್ರಂಥಗಳು ಸುಲಭವಾಗಿ ಅರ್ಥವಾಗುವಹಾಗೆ—ಅಲ್ಲದೆ ಹೆಚ್ಚು ಜನಗಳು ಓದಿ ತಿಳಿದುಕೊಳ್ಳಲು ಅನುಕೂಲವಾಗುವಹಾಗೆ—ವ್ಯಾಖ್ಯಾನಗಳನ್ನೂ ಅರ್ಥತಾತ್ಪರ್ಯಗಳನ್ನೂ ಬರೆದು ಸಾಹಿತ್ಯಸೇವೆಯನ್ನು ಮಾಡುತ್ತಾರೆ. ಹೆಚ್ಚು ಜನರು ಓದುವುದರಿಂದ ಮೂಲಗ್ರಂಥದ ಯಶಸ್ಸು ಪ್ರಸರಿಸುತ್ತದೆ. ಶ್ರೀ ಪಂಡಿತ ಗೋಪಾಲಕೃಷ್ಣಮಾಚಾರ್ಯರು “ಕರ್ಣಾಟಕ ಹಂಸಸಂದೇಶ” ವೆಂಬ ಬೆಟ್ಟಕ್ಕೆ ತಮ್ಮ ಟೀಕಾತಾತ್ಪರ್ಯಗಳ ಮೂಲಕ ಸುಗಮವಾದ ಸೋಪಾನಗಳನ್ನು ಕಟ್ಟಿಕೊಟ್ಟಿದ್ದಾರೆ. “ಹಂಸಸಂದೇಶ” ವನ್ನು ಸ್ಕೂಲು ಮತ್ತು ಕಾಲೇಜುಗಳಲ್ಲಿಯೂ ಪಾಠಕ್ಕೆ ಇಡಬೇಕೆಂದು ನನ್ನ ಹಾರೈಕೆ. ಈ ಗ್ರಂಥವು ಸರ್ವಾನುಮತದಿಂದ ಪ್ರೋತ್ಸಾಹಕ್ಕೆ ಅರ್ಹವಾಗಿದೆ. ವಿದ್ಯಾಭ್ಯಾಸದ ಇಲಾಖೆ ಮತ್ತು ವಿಶ್ವವಿದ್ಯಾನಿಲಯದ ಅಧಿಕಾರಿಗಳು ಈ ಗ್ರಂಥವನ್ನು ಪ್ರೋತ್ಸಾಹಿಸುತ್ತಾರೆಂದು ನಂಬುತ್ತೇನೆ.

**ಎಸ್. ಜಿ. ಶಾಸ್ತ್ರಿ.**

4—1—39

ಸುಪ್ರಸಿದ್ಧರಾದ ವೇದಾನ್ತಾಚಾರ್ಯರ ಸಂಸ್ಕೃತ ಹಂಸಸಂದೇಶವು ಕನ್ನಡಕ್ಕೆ ಬರೆದಿರುವುದು ನನ್ನಿಂದ ಅನೇಕಕಡೆ ಚೆನ್ನಾಗಿ ನೋಡಲ್ಪಟ್ಟಿತು. ಈ ಕನ್ನಡಹಂಸಸಂದೇಶವು ಮೂಲಗ್ರನ್ಥದ ತಾತ್ಪರ್ಯವನ್ನು ಸರಿಯಾಗಿ ಅನುಸರಿಸಿದೆ. ಇದರ ಭಾಷೆಯು ಸುಲಭವೂ ಮನೋಹರವೂ ಆದ ಶೈಲಿಯುಳ್ಳದ್ದಾಗಿದೆ. ಇದನ್ನು ನೋಡಿ ನಾನು ಸಂತೋಷಪಟ್ಟಿದ್ದೇನೆ. ಕನ್ನಡ ಭಾಷಾಭಿಮಾನಿಗಳು ಈ ಗ್ರನ್ಥಕ್ಕೆ ಯೆಲ್ಲವಿಧದಲ್ಲೂ ಪ್ರೋತ್ಸಾಹಕೊಡುವರೆಂಬ ಭರವಸೆಯು ನನಗೆ ದೃಢವಾಗಿದೆ. ಈ ಕನ್ನಡ ಹಂಸಸಂದೇಶ ಕರ್ತೃಗಳಾದ ಪಂಡಿತ ಹೆಚ್. ಗೋಪಾಲಕೃಷ್ಣಮಾಚಾರ್ಯರವರನ್ನು ನಾನು ಅನೇಕ ವರ್ಷಗಳಿಂದಲೂ ಬಲ್ಲೆನು. ಇವರ ಪಾಂಡಿತ್ಯ ಸದ್ಗುಣಗಳು ತುಂಬ ಶ್ಲಾಘ್ಯತರವಾಗಿವೆ.

**ಅ. ಸುಬ್ರಹ್ಮಣ್ಯಶಾಸ್ತ್ರಿ,**
ಆಸ್ಥಾನ ವಿದ್ವಾನ್, ಮೀಮಾಂಸಾ ಪ್ರೊಫೆಸರ್,
ಮಹಾರಾಜ ಸಂಸ್ಕೃತ ಕಾಲೇಜ್,
ಮೈಸೂರು.

3—10—38

# ಶುದ್ಧಾಶುದ್ಧ ಪತ್ರಿಕೆ.

| ಪುಟ | ಪಙ್ಕ್ತಿ | ಅಶುದ್ಧ | ಶುದ್ಧ |
|---|---|---|---|
| ಪೂರ್ವಕಥೆ | ೧೫ | ಹನುಮಂತನ | ಆಂಜನೇಯನ |
| ,, | ೧೭ | ಹನುಮಂತನ | ಮಾರುತಿಯ |
| ೪ | ೧೭ | ಯಾಚ್ನ್ಯಾ | ಯಾಜ್ಞ್ಯಾ |
| ೭ | ೨೧ | ಕ್ಷಮಾಣಾ | ಕ್ಷಮಾಣಾ— |
| ೮ | ೧೧ | ಪ್ರೀತ್ರೈ | ಪ್ರೀತ್ಯೈ |
| ೮ | ೧೧ | ಗಚ್ಛ | ಗಚ್ಛ— |
| ೧೦ | ೧೯ | ಮಹ ಮಿಕಾ | ಮಹಮಿಕಾ |
| ೧೩ | ೭ | ರಾಜಹಂಸ | ರಾಜಹಂಸ— |
| ೧೩ | ೧೯ | ಧ್ವಾಸ | ಧ್ವಾಸ— |
| ೧೩ | ೨೧ | ಭೂ | ಭೂ— |
| ೧೯ | ೩ | ಅಭ್ರೈ | ಅಬ್ಭ್ರೈ |
| ೨೯ | ೨೩ | ದೇರ್ ವಹಂಸ್ಯೈಃ | ದೇರ್ವಹಂಸ್ಯೈಃ |
| ೩೦ | ೧೮ | ,ಬ್ರಹ್ಮನ | ಬ್ರಹ್ಮನ, |
| ೩೨ | ೨೧ | ಮಂತ್ರೇ | ಮಂ ತೇ |
| ೩೭ | ೧೫ | ಕಟ್ಟುನ್ನು | ಕಟ್ಟನ್ನು |
| ೩೮ | ೨ | ಸ್ಸರಿ | ಸರಿ |
| ೪೨ | ೨೪ | ಸತ್ವಮವಾದ | ಸತ್ವಮಯವಾದ |
| ೪೬ | ೫ | ಅಗಿದೆ | ಆಗಿದೆ |
| ೪೬ | ೨೧ | ಸತ್ಯಾ | ಸತ್ರಾತ್ರಿ |
| ೫೪ | ೪ | ರಹೊಕ್ಕೆ | ಹೊರಕ್ಕೆ |
| ೫೭ | ೧೮ | ಅಗ್ನಿ | ಅಗ್ನಿ |
| ೫೯ | ೧೧ | ಗಳ | ಗಳು |
| ೬೦ | ೩ | ವಿಶ್ವಕರ್ಮ ಮಯ | ವಿಶ್ವಕರ್ಮ, ಮಯ |
| ೬೬ | ೧೦ | ಆರ್ಹ | ಆರ್ಹ |
| ೬೯ | ೧೦ | ಅಮಳ | ಅವಳು |
| ೭೧ | ೧ | ಮಯಾಪ್ರಾಕ್ | ಮಯಾ ಪ್ರಾಕ್ |
| ೭೧ | ೨ | ಪಾಪ ಕೀರ್ಣಂ | ಪಾಪಕೀರ್ಣಂ |
| ೭೧ | ೩ | ಪತೇ ರಪ್ಸ | ಪತೇರಪ್ಸ |
| ೭೪ | ೫ | ಯಯಾಕಿಂಚದೂನಾಂ | ಯಯಾ ಕಿಂಚ ದೂನಾಂ |
| ೭೪ | ೯ | ಚಿಗುರುಬಿಸಿಲಿನ | ಚಿಗುರು, ಬಿಸಿಲಿನ |
| ೭೫ | ೩ | ಸ್ಯಂತೀ ಮುನಿ | ಸ್ಯಂತೀಮುನಿ |
| ೭೭ | ೨ | ಭೂಮಯಗಳು | ಭೂಮಿಗಳು |
| ೮೩ | ೨೦ | ಆಧಿಗತ | ಅಧಿಗತ |
| ೮೫ | ೪ | ಜನಕಯೋಃ ವರ್ಣ | ಜನಕಯೋರ್ವರ್ಣ |
| ೯೫ | ೪ | ಪುಕ್ಸಾ | ಪುಷ್ಪೌ |
| ೯೮ | ೭ | ಹೀಗೆಂದ್ರ | ಹೀಗೆಂದು |
| ೧೦೧ | ೧೪ | ಯಾಮಾಮೇಕಾವನ | ಯಾ ಮಾಮೇಕಾ ವನ |
| XX | ೧೯ | ದಶೋಪನಿಷತ್ತಿನಲ್ಲಿ | ಉಪನಿಷತ್ತಿನಲ್ಲಿ |

